## ಇದೇ ಗ್ರಂಥಕರ್ತನು ರಚಿಸಿರುವ ಇತರ ಪುಸ್ತಕಗಳು

| | ರೂ. ಆ. ಪೈ. |
|---|---|
| ಕಾಳಿದಾಸನು ಶೃಂಗಾರರಸವನ್ನು ಚಿತ್ರಿಸಿರುವ ಬಗೆ | ೦—೮—೦ |
| ಹಳ್ಳಿಯ ಕಥೆಗಳು | ೦—೮—೦ |
| ಪೈಗಂಬರ ಮಹಮ್ಮದನು | ೧—೦—೦ |
| ಮಂಡೋದರಿ (ಪೌರಾಣಿಕ ನಾಟಕ) | |
| ಕ್ಯಾಲಿಕೋ ಪ್ರತಿ | ೧—೮—೦ |
| ಸಾಮಾನ್ಯ ಪ್ರತಿ | ೧—೦—೦ |
| ನಮ್ಮ ಸಮಾಜ (ಸಾಮಾಜಿಕ ನಾಟಕ) | ೧—೦—೦ |
| ತುರಾಯಿ (ಏಳು ಕಥೆಗಳಿರುವ ಗ್ರಂಥ) | ೧—೦—೦ |
| ಸುಂದರಿ (ಸಾಮಾಜಿಕ ನಾಟಕ) | ೦—೧೨—೦ |

**"ನಮ್ಮ ಸಮಾಜ"** ಎಂಬ ಗ್ರಂಥವನ್ನು **"ರಾಮಮೋಹನ ಕಂಪನಿ, ಬಳೇಪೇಟೆ, ಬೆಂಗಳೂರು ಸಿಟಿ"** ಈ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು. ಉಳಿದ ಗ್ರಂಥಗಳನ್ನು **"ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ"** ಈ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

# ಮುನ್ನುಡಿ

ಕಠೋಪನಿಷತ್ತಿನಲ್ಲಿ ವರ್ಣಿತನಾಗಿರುವ ಮಹಾಪುರುಷ ನಚಿಕೇತನು ಕಥಾನಾಯಕನಾಗಿರುವಂತೆ ಈ ನಾಟಕವನ್ನು ಬರೆದಿದ್ದೇನೆ. ಪುಣ್ಯಶ್ಲೋಕನಾದ ಆತನ ಕಥೆಯು ತೈತ್ತಿರೀಯ ಬ್ರಾಹ್ಮಣ, ಕಠೋಪನಿಷತ್ತು, ಮಹಾಭಾರತ—ಇವು ಮೂರರಲ್ಲಿಯೂ ಬರುತ್ತದೆ.

ಅವು ಮೂರನ್ನೂ, ಅವುಗಳ ಜೊತೆಗೆ ಕಠೋಪನಿಷತ್ತಿನ ಶ್ರೀಮಚ್ಛಂಕರಭಾಷ್ಯ, ಶ್ರೀ ರಂಗರಾಮಾನುಜೀಯ ವ್ಯಾಖ್ಯಾನ, ಮುಂತಾದವುಗಳನ್ನೂ ಓದಿ ಮನನಮಾಡಿ ನಚಿಕೇತ, ಅವನ ತಂದೆ ವಾಜಶ್ರವಸ, ಯಮಧರ್ಮರಾಜ, ಈ ಮೂರು ಪಾತ್ರಗಳನ್ನೂ ಅಳವಡಿಸಿದ್ದೇನೆ. ಮೂಲದಲ್ಲಿ ದೊರೆತ ಕಥಾಭಾಗವು ತೀರ ಸ್ವಲ್ಪವಾದ ಕಾರಣ, ಈ ಮೂರು ಪಾತ್ರಗಳ ವಿಚಾರದಲ್ಲಿ ಮೂಲ ಗ್ರಂಥಗಳೂ ಭಾಷ್ಯವ್ಯಾಖ್ಯಾನಗಳೂ ಸೂಚಿಸಿರುವ ಮುಖ್ಯ ಲಕ್ಷಣಗಳಿಗೆ ವಿರೋಧ ಬಾರದಂತೆ ಬೇರೆ ಬೇರೆ ಸನ್ನಿವೇಶಗಳನ್ನೂ, ಕೆಲವು ಹೊಸ ಪಾತ್ರಗಳನ್ನೂ ಕಲ್ಪಿಸಿ ಈ ನಾಟಕವನ್ನು ಬರೆದಿದ್ದೇನೆ.

ಜೀವನದ ನಿಜಸ್ವಭಾವವೇನೆಂಬುದು ಗಭೀರ ಸಮಸ್ಯೆಯಾಗಿದೆ. ದೇಹಾತೀತವಸ್ತು ವೊಂದಿದೆಯೇ, ಇಲ್ಲವೇ—ಎಂಬ ಪ್ರಶ್ನೆಯು ಇಂದೂ ಜಗತ್ತಿನ ಮುಂದಿದೆ; ಹಿಂದೆ ಕೂಡ ಅಂದಿನ ಜಗತ್ತಿನ ಮುಂದೆಯೂ ಇದ್ದಿತು. ಈ ಪ್ರಶ್ನೆಗೆ ಪ್ರತಿಯೊಬ್ಬರೂ ತಮ್ಮ ಸಂಸ್ಕಾರ ಪ್ರತಿಭೆಗಳ ಮಟ್ಟಕ್ಕನುಸಾರವಾಗಿ ಉತ್ತರಹೇಳಲು ಪ್ರಯತ್ನಿಸಿದ್ದಾರೆ.

ಕಠೋಪನಿಷತ್ತಿನಲ್ಲಿ ಹೇಳಿರುವಂತೆ ನಚಿಕೇತನು ಬ್ರಹ್ಮವಿದ್ಯಾಚಾರ್ಯನಾದ ಯಮಧರ್ಮರಾಜನನ್ನು ಕೇಳುವುದೂ "ಅಸ್ತೀ

ತ್ಯೇಕೇ ನಾಯಮಸ್ತೀತಿ ಚೈಕೇ" ಎಂದೇ! ದೇಹಾತೀತವಸ್ತುವು ಉಂಟೆಂದು ಕೆಲವರೂ, ಇಲ್ಲವೆಂದು ಕೆಲವರೂ ಹೇಳುವರೆಂದೂ, ಯಮಧರ್ಮರಾಜನು ತನಗೆ ಆ ವಿಚಾರದಲ್ಲಿ ನಿರ್ಧರ ಹೇಳ ಬೇಕೆಂದೂ ಅವನು ವರವನ್ನು ಬೇಡುವನು.

ಆಧ್ಯಾತ್ಮಿಕ ಸಾಧನೆಯು ಆಚಾರ್ಯನ ಅನುಗ್ರಹದಿಂದ ಲಭಿಸಿದ ಯೋಗ ಮುಂತಾದವುಗಳ ಅವಲಂಬನದಿಂದ ಧೈರ್ಯಶಾಲಿಗಳು ಮಾಡಿ ನೋಡಬೇಕಾದುದೆಂದೂ ಬಲಹೀನರೆಲ್ಲರೂ ಆಡಿ ಮುಗಿಸತಕ್ಕುದಲ್ಲವೆಂದೂ ಮಹರ್ಷಿಗಳ ಮತ. ನಚಿಕೇತನಿಗೆ ಮಾನ್ಯವಾದ ಉಚ್ಚ ಸ್ಥಾನವು ದೊರೆಯಬೇಕಾಗುವುದು ಧೈರ್ಯದಿಂದ ಕೂಡಿದ ಅವನ ಅದ್ಭುತ ಸಾಧನೆಯ ದೃಷ್ಟಿಯಿಂದ.

ಆಧ್ಯಾತ್ಮಿಕ ವಿಚಾರಗಳಲ್ಲಿ ನಿಜದ ನೆಲೆಯನ್ನರಿಯುವುದು ಮಾತಿನ ಬಣಿತೆಯಿಂದ ಸಾಧ್ಯವಿಲ್ಲ. "ನಾಯಮಾತ್ಮಾ ಬಲಹೀನೇನ ಲಭ್ಯಃ"—ಎಂದೇ ಉಪನಿಷತ್ತು ಸಾರಿದೆ. ಬ್ರಹ್ಮಸೂತ್ರಕಾರರು "ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿಚೇದೇವಮಪ್ಯವಿಮೋಕ್ಷಪ್ರಸಂಗಃ।" ಎಂದು ಹೇಳಿರುವುದೂ ಆಧ್ಯಾತ್ಮಿಕಸಿದ್ಧಿಯು ತರ್ಕದೂರವಾಗಿ ಸಾಧನಾನುಭವಗಳಿಂದ ಮಾತ್ರವೇ ಲಭಿಸತಕ್ಕುದೆಂಬುದನ್ನು ಸೂಚಿಸುವುದಕ್ಕಾಗಿಯೇ. ಸರಳೆಯನ್ನೂ ಕೂಗದೆ ಸಂಗೀತರತ್ನಾಕರವನ್ನೋದಿದ ಮಾತ್ರದಿಂದಲೇ ಸಭಿಕರು ತಲೆದೂಗುವಂತೆ ರಾಗಾಲಾಪನಮಾಡಿದವರನ್ನು ಯಾರೂ ಕಂಡಿಲ್ಲ.

ವಿಜ್ಞಾನಶಾಸ್ತ್ರದ (Science) ಜಯಭೇರಿಯು ಮೊಳಗುತ್ತಿರುವ ಈ ನವಯುಗದಲ್ಲಿ ಯೋಗಸಾಧನೆ ಮುಂತಾದವುಗಳನ್ನು ಆದರಿಸುವ ಬಗೆ ಹೇಗೆಂಬ ಸಂಶಯವುಂಟಾಗಬಹುದು. ಪ್ರತ್ಯಕ್ಷ ಪ್ರಮಾಣದಿಂದ ತೋರಿಸಿಕೊಡುವುದು ಸಾಧ್ಯವಿಲ್ಲದ ವಿಚಾರಗಳಲ್ಲಿ ಆಪ್ತವಾಕ್ಯಪ್ರಮಾಣವನ್ನು ಸ್ವೀಕರಿಸಿ, ಹಿಂದಿನ ಸಾಧುಸಂತರ—ಈಚಿನವರಾದ ಶ್ರೀ ರಾಮಕೃಷ್ಣ ಪರಮಹಂಸರೇ ಮುಂತಾದವರ—

ಅನುಭವಗಳು ಸುಳ್ಳಲ್ಲವೆಂದು ಭಾವಿಸುವುದೇ ಉತ್ತಮ. ವಿಜ್ಞಾನ ಶಾಸ್ತ್ರಜ್ಞನು, ತಾನು ತನ್ನ ಉಪಕರಣಗಳ ಸಹಾಯದಿಂದಲೇ ಸಿದ್ಧಾಂತಗಳನ್ನೇರ್ಪಡಿಸುತ್ತಿರುವುದನ್ನು ಗಮನಿಸಿ, ಆಧ್ಯಾತ್ಮಿಕ ವಿಚಾರಗಳನ್ನು ತನ್ನ ಅನುಭವದ ಮಾನದಂಡದಿಂದ ಮಾತ್ರವೇ ಅಳೆಯದೆ, ಅವುಗಳ ಸಂಬಂಧದ ಯೋಗ ಮುಂತಾದ ಸಾಧನ ಸಂಪತ್ತಿಗಳ ಸಹಾಯವನ್ನೇ ಪಡೆದು ಒರೆಹಿಡಿದು ನೋಡಬೇಕಲ್ಲವೆ? ಅವು ಸುಳ್ಳೇ ನಿಜವೇ ಎಂಬುದನ್ನು ಆ ಬಳಿಕ ಇತ್ಯರ್ಥ ಪಡಿಸಬೇಕಲ್ಲವೆ?

ಜಗತ್ತು ಉದ್ದೇಶಶೂನ್ಯವಾಗಿ ಜಡವಸ್ತು"ನಿರ್ಮಿತವಾದುದಲ್ಲವೆಂದೇ ಅಭಿಪ್ರಾಯ ಹುಟ್ಟುವಂತೆ ಮಾನ್ಯರಾದ ಸರ್ ಜೇಮ್ಸ್ ಜೀನ್ಸ್, ಸರ್ ಆಲಿವರ್ ಲಾಡ್ಜ್, ಬರ್ಗ್‌ಸಾನ್ ಮುಂತಾದ ಇಂದಿನ ವಿಜ್ಞಾನಶಾಸ್ತ್ರಜ್ಞರೂ, ತತ್ತ್ವಶಾಸ್ತ್ರಜ್ಞರೂ ವಾದಿಸುತ್ತಿದ್ದಾರೆ.* ಉಪನಿಷತ್ತುಗಳಲ್ಲಿ ಹೇಳಿರುವ ಉದಾತ್ತ ತತ್ತ್ವಗಳು ನಿಜವೆಂಬುದನ್ನು ಪಾಶ್ಚಿಮಾತ್ಯರು ಅನೇಕರು ಒಪ್ಪಿದ್ದಾರೆ. ಉಳಿದವರೂ ಆ ರೀತಿ

---

* "The universe begins to look more like a great thought than a great machine..........The universe shows evidence of a designing and controlling power that has something in common with our individual mind"—**Sir James Jeans.**

"There is evidence of mind at work, beneficient and contriving mind, actuated by purpose, a purpose inspired by a far-seeing insight, a deep understanding, an adaptation to conditions."—**Sir Oliver Lodge.**

"It begins to be evident that there is something of the psychological order immanent in all things, low as well as high, which feels and strives and achieves" —**Bergson.**

ಮಾಡುವ ಕಾಲವೂ ಶೀಘ್ರದಲ್ಲಿಯೇ ಬರಬಹುದೆಂದರೆ ಬಹುಶಃ ಅದು ತಪ್ಪಾಗಲಾರದು. ಇದನ್ನು ಒಪ್ಪಲಾರದವರು ಒಂದು ವಿಷಯ ವನ್ನು ಮಾತ್ರ ಮರೆಯಬಾರದು: ವಿಜ್ಞಾನಶಾಸ್ತ್ರಜ್ಞರ ವಾದಗಳೂ ಕಾಲದಿಂದ ಕಾಲಕ್ಕೆ ಮಾರ್ಪಡುತ್ತಿವೆ; ಅವರೂ ನಿಷ್ಕೃಷ್ಟಜ್ಞಾನದ ಘಟ್ಟವನ್ನಿಳಿಸಿ ಇನ್ನೂ ಸಿದ್ಧಮಾಡಿಲ್ಲ; ಎಲ್ಲ ವಿಚಾರಗಳಲ್ಲಿಯೂ ಅವರೂ ಕೊನೆಯ ತೀರ್ಮಾನವನ್ನು ಹೇಳಿಲ್ಲ.

ಮೂಲಗ್ರಂಥಗಳಲ್ಲಿಲ್ಲದ ಅನೇಕ ಸನ್ನಿವೇಶಗಳನ್ನು ಸೇರಿಸಿ ಈ ನಾಟಕವನ್ನು ಬರೆದಿರುವೆನು. ಆದಾಗ್ಗೂ, ಆ ಕಾಲದ ಜನ ಜೀವನ ವಿಧಾನಕ್ಕೂ, ಆಗಿನ ಆಚಾರ ವ್ಯವಹಾರಗಳ ವಾತಾ ವರಣಕ್ಕೂ ಲೇಶಮಾತ್ರವೂ ಭಂಗಬಾರದಂತೆ ಋಗ್ವೇದ, ಉಪ ನಿಷತ್ತುಗಳು ಮುಂತಾದವುಗಳಿಂದ ಅವುಗಳನ್ನು ಗ್ರಹಿಸಿ ಆ ರೀತಿ ಸೇರಿಸಿದ್ದೇನೆ. ನಾಟಕ ಕಲೆಯ ಮರ್ಮವನ್ನರಿತವರಿಗೆ ಅವು ಸೊಗಸದಿರಲಾರವೆಂದು ವಿನೀತಭಾವದಿಂದ ನಂಬಿದ್ದೇನೆ. ಯಮನ ಆಸ್ಥಾನ ದೃಶ್ಯದಲ್ಲಿಯ ವೇಣುಗಾನ, ಜರತಾರಿಯ ವಸ್ತ್ರ ಮುಂತಾ ದವುಗಳು, ಇತರ ದೃಶ್ಯಗಳಲ್ಲಿ ಸೂಚಿಸಿರುವ ಪ್ರಸಾಧನಗಳು— ಇವೆಲ್ಲವೂ ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಹೇಳಿರುವುದ ಕ್ಕನುಸಾರವಾಗಿವೆ.

ನಚಿಕೇತನಂತಹ ಮಹಾಪುರುಷನ ಜೀವನದ ಭಾಗ್ಯಪಙ್ಕ್ತಿ ಯನ್ನು ಚಿತ್ರಿಸುವಲ್ಲಿ ಆ ಪುಣ್ಯಾತ್ಮನ ವಿಚಾರವಾಗಿ ಅಪಚಾರವು ನಡೆಯದಂತೆ ನೋಡಿಕೊಳ್ಳಬೇಕೆಂದು ಶ್ರದ್ಧೆಯಿಂದ ಪ್ರಯತ್ನಿಸಿ, ಆತನ ಉದಾತ್ತ ಜೀವನದ ಔನ್ನತ್ಯಕ್ಕೆ ಕುಂದುಂಟಾಗದಿರುವಂತೆ ತಕ್ಕ ಘಟನೆಗಳನ್ನೇ ಕಲ್ಪಿಸಿ ಜೋಡಿಸಿದ್ದೇನೆ. ಶ್ರವ್ಯಕಾವ್ಯದಲ್ಲಿ ತೀರ ಯುಕ್ತವೆನಿಸುವ ಕೆಲವು ಅಂಶಗಳು ದೃಶ್ಯಕಾವ್ಯದಲ್ಲಿ ಅಸಂಗತ ವೆನಿಸುವುವು. ಕಠೋಪನಿಷತ್ತಿನ ಬೋಧನಾಭಾಗವನ್ನು ಬಿಟ್ಟಿರು ವುದಕ್ಕೆ ಇದೇ ಕಾರಣ. ಆತ್ಮಸಾಕ್ಷಾತ್ಕಾರದ ಸಾಧನೆಯು ನಡೆ

ಯುತ್ತಿರುವಾಗ ಯೋಗಸಂಬಂಧವಾದ ಕೆಲವು ಪ್ರಕ್ರಿಯೆಗಳು ಕಂಡುಬರುವುವು. ರಂಗಸ್ಥಳದಮೇಲೆ ನಾಟಕವು ರಂಜಕವಾಗಿಯೂ ಇದ್ದು, ಈ ಪ್ರಕ್ರಿಯೆಗಳೂ ಸಾಂಕೇತಿಕವಾಗಿ ವ್ಯಕ್ತವಾಗುವಂತಹ ಘಟನೆಗಳನ್ನು ಹೊಂದಿಸಿದ್ದೇನೆ. ಯೋಗಶಾಸ್ತ್ರದಲ್ಲಿ ನಂಬಿಕೆಯಿಲ್ಲದವರು ಆ ಘಟನೆಗಳ ಸಾಂಕೇತಿಕ ಸ್ವಭಾವವನ್ನು ಗಮನಿಸದೆಯೇ ನಾಟಕಕ್ಕೆ ಅವುಗಳ ಪ್ರಯೋಜನವನ್ನು ಕಾಣಬಹುದಾಗಿದೆ. ಯೋಗಶಾಸ್ತ್ರದಲ್ಲಿ ನಂಬಿಕೆಯಿರುವವರು ಆ ಘಟನೆಗಳ ಸಾಂಕೇತಿಕವಾದ ಅಂತರಾರ್ಥವನ್ನೂ ಗ್ರಹಿಸಿ ಸಂತೋಷಿಸಿದರೆ, ನನ್ನ ಪ್ರಯತ್ನಕ್ಕೆ ದ್ವಿಗುಣವಾದ ಫಲವು ಲಭಿಸಿತೆಂದು ಆನಂದಿಸುವೆನು.

ಮೂಲದಲ್ಲಿಲ್ಲದ ಘಟನೆಗಳೊಂದನ್ನೂ ಸೇರಿಸಕೂಡದೆಂದು ಅಭಿಪ್ರಾಯಪಡುವವರೂ ಇದ್ದಾರೆ. ಕಠೋಪನಿಷತ್ತಿನಲ್ಲಿರುವ ನಚಿಕೇತನ ಕಥೆಗೂ, ಮಹಾಭಾರತದಲ್ಲಿರುವ ಅದೇ ನಚಿಕೇತನ ಕಥೆಗೂ ಪರಸ್ಪರ ವ್ಯತ್ಯಾಸವಿರುವುದನ್ನು ಅವರು ಗಮನಿಸಬೇಕು. ವೇದದ ಕಾಲದಲ್ಲಿ ಹಿರಣ್ಯಗರ್ಭನಿಗೆ ಎರಡನೆಯವನಾಗಿದ್ದ ಇಂದ್ರನೇ ಪುರಾಣಗಳ ಕಾಲಕ್ಕೆ ತನ್ನ ಸ್ಥಾನಮಾನಗಳನ್ನು ಕಳೆದುಕೊಂಡಿದ್ದಾನೆ. ಬ್ರಹ್ಮವಿದ್ಯಾಚಾರ್ಯನಾಗಿದ್ದ ಯಮಧರ್ಮರಾಜನ ಸತ್ವಗುಣಪ್ರಧಾನವಾಗಿದ್ದ ಮೂರ್ತಿಯು ಪುರಾಣಗಳ ಕಾಲಕ್ಕೆ ರಜೋಗುಣಪ್ರಧಾನವಾದ ಮೂರ್ತಿಯಾಯಿತು. ಈ ಅಂಶಗಳನ್ನೂ ಅವರು ಗಮನಿಸಬೇಕೆಂದು ಬಿನ್ನಹ. ಪಂಚರಾತ್ರ, ಮಹಾವೀರಚರಿತ, ಜಾನಕೀಪರಿಣಯ, ಉನ್ಮತ್ತರಾಘವ ಮುಂತಾದ ರೂಪಕಗಳಲ್ಲಿ ಮೂಲಕ್ಕೆ ತೀರ ವಿರುದ್ಧವಾದ ಘಟನೆಗಳೇ ಚಿತ್ರಿತವಾಗಿವೆ. ಹೀಗಿರುವಲ್ಲಿ ಮೂಲಕ್ಕೆ ವಿರುದ್ಧವಿಲ್ಲದ ಹೊಸ ಘಟನೆಗಳನ್ನು ಸೇರಿಸುವಷ್ಟು ಸ್ವಾತಂತ್ರ್ಯವೂ ಈಗಿನವರಿಗಿರಕೂಡದೆನ್ನುವುದಕ್ಕೆ ಕಾರಣವಿಲ್ಲ.

ಶ್ರುತಿಕಷ್ಟವಾಗದಿರಲೆಂಬ ಉದ್ದೇಶದಿಂದ "ನಚಿಕೇತಸ್" ಎಂಬ ಮೂಲ ಪದವನ್ನು "ನಚಿಕೇತ" ಎಂದು ಬರೆದಿದ್ದೇನೆ. ಇದೇ

ರೀತಿಯಲ್ಲಿ "ನಮೋ ನಮಃ" ಎಂಬುದನ್ನೂ ಭಾವಪಾರವಶ್ಯವನ್ನು ಸೂಚಿಸುವಾಗ್ಗೆ—ಮೊದಲನೆಯ ದೃಶ್ಯದಲ್ಲಿ ತುಂಬುರ ನಾರದರು ಮಾತನಾಡುವಾಗ್ಗೆ ಒಂದು ಸಲವೂ ಮತ್ತು ಕೊನೆಯ ದೃಶ್ಯದಲ್ಲಿ ನಚಿಕೇತನು ಮಾತನಾಡುವಾಗ್ಗೆ ಮೂರು ಸಲವೂ—"ನಮೋ ನಮೋ" ಎಂದು ವ್ಯಾಕರಣ ಶುದ್ಧವಲ್ಲದ ರೂಪದಲ್ಲಿ ಬರೆದಿದ್ದೇನೆ. ಉಳಿದ ಸಂದರ್ಭಗಳಲ್ಲಿ "ನಮೋ ನಮಃ" ಎಂದೇ ಪ್ರಯೋಗಿಸಿದ್ದೇನೆ. ನಾದಮಾಧುರ್ಯಕ್ಕಾಗಿ "ನಮೋ ನಮೋ" ಎಂಬ ಪ್ರಯೋಗವೇ "ನಾದಬಿಂದು ಕಲಾತೀತ ನಮೋ ನಮೋ" ಮುಂತಾದ ಗೀತೆಗಳಲ್ಲಿದೆ. ಕೆಲವು ಸಂದರ್ಭಗಳಲ್ಲಿ "ನಮೋ ನಮಃ" ಎಂದರೆ ಏನೋ ಮೊಟಕಾದಂತೆ—ಊನವಾದಂತೆ—ಕಾಣುತ್ತದೆ.

ಆರ್ಯ ಸಂಸ್ಕೃತಿಯ ಮೇಲಣ ಅಭಿಮಾನದಿಂದ ಇದನ್ನು ಬರೆದು, ಭಕ್ತಿನಮ್ರವಾಗಿ ಇದನ್ನು ಕನ್ನಡಿಗರಿಗೆ ಸಮರ್ಪಿಸಿರುವೆನು. ಇದರಿಂದ ಅವರಿಗೆ ಅಲ್ಪಸ್ವಲ್ಪ ಸಂತೋಷವುಂಟಾದರೂ ನನ್ನ ಸೇವೆಯು ಸಾರ್ಥಕವಾಗಿ, ನನ್ನ ಶ್ರಮಕ್ಕೆ ಮೀರಿದ ಅಮೂಲ್ಯವಾದ ಪ್ರತಿಫಲವು ದೊರೆಯಿತೆಂದು ಕೃತಜ್ಞತೆಯಿಂದ ಹಿಗ್ಗುವೆನು.

ಬೆಂಗಳೂರು,
೨೮-೩-೧೯೩೪.

ಸಿ. ಕೆ. ವೆಂಕಟರಾಮಯ್ಯ.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೦ | ೫ | ಸ್ರುಕ್ಸ್ನವಗಳು | ಸ್ರುಕ್ಸ್ರುವಗಳು |
| ೫೪ | ೧೬ | ಘೂಯಿಷ್ಟವಾಗಿ | ಭೂಯಿಷ್ಠವಾಗಿ |
| ೫೬ | ೫ | ಭಾಗ್ಯಪಙ್ತಿಯ | ಭಾಗ್ಯಪಙ್ಕ್ತಿಯ |
| ೫೯ | ೧೬ | ಪೀತ್ಯಾದರಗಳಿಂದ | ಪ್ರೀತ್ಯಾದರಗಳಿಂದ |
| ೭೯ | ೨೧ | ಘೂಲೇಕದ | ಭೂಲೋಕದ |
| ೮೬ | ೨೫ | ಅಗ್ನಿಮಿಾಲೇ | ಅಗ್ನಿಮೀಳೇ |
| ೯೦ | ೧ | ಪೂರ್ವೇಭಿರ್ರುಷಿ | ಪೂರ್ವೇಭಿರ್ಋಷಿ |
| ೧೦೬ | ೧೯ | ನೀಯವಾದೊಂದು | ನೀಯುವಾದೊಂದು |
| ೧೧೨ | ೮ | ದಾವಾಲನ | ದಾವಾನಲ |
| ೧೧೭ | ೨ | ಅದ್ಬುತ | ಅದ್ಭುತ |

# ಪಾತ್ರಗಳು

| | | |
|---|---|---|
| ನಚಿಕೇತ | .... | ಋಷಿಪುತ್ರ |
| ವಾಜಶ್ರವಸ | .... | ನಚಿಕೇತನ ತಂದೆ |
| ನಂದಿನೀದೇವಿ | .... | ನಚಿಕೇತನ ತಾಯಿ |
| ಸುಕನ್ಯೆ | .... | ನಚಿಕೇತನ ತಂಗಿ |
| ವಾಮದೇವ | .... | ಗುರುಕುಲದ ಸ್ವಾಮಿ (ನಚಿಕೇತನ ಗುರು) |
| ಯಮಧರ್ಮರಾಜ | | |
| ಶ್ಯಾಮಲಾದೇವಿ | .... | ಯಮಧರ್ಮರಾಜನ ಪತ್ನಿ |
| ಅಗ್ನಿ | | |
| ಅಶ್ವಸೇನ | .... | ಮಹಾರಾಜ |
| ಹಿರಣ್ಯಗರ್ಭ | | |
| ವಾಣಿ | | |
| ನಾರದ | | |
| ಪೃಥ್ವೀದೇವಿ, ದ್ಯಾರ್ದೇವ | .... | ದೇವ ಮಾತಾಪಿತೃಗಳು |
| ಚಿತ್ರಗುಪ್ತ | .... | ಯಮ ಧರ್ಮರಾಜನ ಮುಖ್ಯ ಭೃತ್ಯ |

ಸನಕಾದಿಗಳು, ಋಷಿಗಳು, ತಾಪಸಿ, ರಾಜಪುರುಷ, ವಟುಗಳು ಭೃತ್ಯರು ಇತ್ಯಾದಿ.

# ನಚಿಕೇತ



## ಮೊದಲನೆಯ ಅಂಕ

### ದೃಶ್ಯ ೧

[ಹಿರಣ್ಯಗರ್ಭನ ಆಸ್ಥಾನ ಮಂಟಪ. ಸನಕಾದಿಗಳೂ, ತುಂಬುರ ನಾರದರೂ, ಸುವರ್ಣ ನಿರ್ಮಿತವಾದ ಆಸನಗಳ ಬಳಿಯಲ್ಲಿ ತಲೆಯಮೇಲೆ ಕೈಜೋಡಿಸಿ ನಿಂತಿರುವರು. ಹಿರಣ್ಯಗರ್ಭನು ವೀಣಾಪಾಣಿಯಾದ ವಾಣಿ ಯಿಂದೊಡಗೂಡಿ ಕಮಲಾಸನದಲ್ಲಿ ಮಂಡಿಸಿರುವನು. ಕಮಲಾಸನದ ಬಳಿ ಯಲ್ಲಿ ಒಂದು ಕಡೆ ಹಂಸವೂ ಮತ್ತೊಂದು ಕಡೆ ನವಿಲೂ, ಇರುವುವು. "ಓಂ, ಓಂ" ಎಂಬಂತೆ ನಗಾರಿಯ ಧ್ವನಿಯೂ ಶಂಖ, ತೂರ್ಯ, ಪಟಹ, ಭೇರೀನಿನಾದವೂ, ವೇದಘೋಷವೂ ಮೊಳಗುತ್ತಿರುವುವು. ಪ್ರತೀಹಾರಿ ಯರು ಜರತಾರಿಯು ಮಿನುಗುತ್ತಿರುವ ಶ್ವೇತವಸ್ತ್ರಧಾರಿಣಿಯರಾಗಿ ಶ್ವೇತ ಚಾಮರಗಳನ್ನು ಬೀಸುತ್ತಿರುವರು. ನಗಾರಿಯೇ ಮುಂತಾದವುಗಳ ಧ್ವನಿ ಯೂ, ವೇದಘೋಷವೂ, ನಿಂತಮೇಲೆ ನಾರದನು ಬ್ರಹ್ಮಸ್ತುತಿಯನ್ನು ಹಾಡುವನು.]

**ಸನಕಾದಿಗಳು:**—(ನಾರದನ ಗೀತವು ಮುಗಿದ ಬಳಿಕ) ಆಚಾರಮಾತ್ರ ಶರಣರಿಗೆ ಆಗಮ್ಯನಾದ ಕಮಲಾಸನನಿಗೆ ನಮೋ ನಮಃ!

**ಸಪ್ತರ್ಷಿಗಳು:**—ಯಜ್ಞಗಳಿಗೆ ಅಲಭ್ಯನೆನಿಸಿರುವ ಪ್ರಣವಸ್ವರೂಪ ನಾದ ಪರಮೇಷ್ಠಿಗೆ ನಮೋ ನಮಃ!

**ತುಂಬುರನಾರದರು:**—ಸ್ಥಿರಭಕ್ತಿಯೋಗ ಸುಲಭನಾಗಿ ತ್ರಿವರ್ಗಾ ತೀತನಾಗಿರುವ ಸರ್ವತೋಭದ್ರನಿಗೆ ನಮೋ ನಮೋ. ಜ್ಞಾನಪ್ರದಾಯಿನಿಯಾಗಿ ಜಗತ್ತಿಗೇ ಕಲ್ಯಾಣದಾಯಕಿ ಯಾಗಿರುವ ಶ್ರೀ ಶಾರದಾಂಬೆಗೆ ನಮೋ ನಮಃ!

**ಹಿರಣ್ಯಗರ್ಭ:**— (ಮಂದಹಾಸದಿಂದಲೂ, ಗಾಂಭೀರ್ಯದಿಂದಲೂ, ಕೂಡಿದ ಸ್ನಿಗ್ಧ ಮಧುರಮುಖಮುದ್ರೆಯಿಂದ) ಶ್ರೇಯಸ್ಸು ಲಭಿಸಲಿ! ಸರ್ವರಿಗೂ ಮಂಗಳವಾಗಲಿ! ಆತ್ಮವಿಕಾಸದ ಅಮಿತಾನಂದವು ಅಖಂಡವಾಗಿ ಲಭಿಸುವಂತೆ ಸಂತತವೂ ಪ್ರಯತ್ನವು ನಡೆದು, ಸರ್ವರ ಮನೋರಥವೂ ಯಥಾಕಾಲ ದಲ್ಲಿ ಸಿದ್ಧಿಯಾಗಲಿ!

**ನಾರದ:**—ದೇವ! ನಿನ್ನ ಮಧುರವಾಣಿಯಿಂದ ವಿಶ್ವಕ್ಕೇ ವರ ಗಳನ್ನು ಕರುಣಿಸಿರುವೆ. ಬಹುಕಾಲವನ್ನೂ ನಾವು ಒಂದೆರಡು ಕ್ಷಣಗಳಂತೆ ಕಳೆದೆವು. ನಿನ್ನ ಉಪದೇಶವಾಣಿಗಳನ್ನು ಕೇಳಿ ಕೇಳಿ ಧನ್ಯರಾದೆವು.

**ವಾಣಿ:**—ಗಾನಕೋಕಿಲವೆ! ಜ್ಞಾನಸಂಪ್ರದಾಯಕನಾದ ನಿನ್ನಿಂದ ನಡೆಯಬೇಕಾದ ಮಹತ್ಕಾರ್ಯವು ಸನ್ನಿಹಿತವಾಗಿರುವುದ ರಿಂದ ಪ್ರಿಯವಲ್ಲಭನು ಸುಪ್ರೀತನಾಗಿರುವನು.

**ನಾರದ:**—ಮಾತೆ! ವಿಶ್ವಮಾತಾಪಿತೃಗಳಾದ ನೀವು ಅದು ನೆರ ವೇರುವಂತೆ ಅನುಗ್ರಹಿಸಿ.

**ಹಿರಣ್ಯಗರ್ಭ:**—ನಾರದ! ದಿವ್ಯದೃಷ್ಟಿಯಿಂದ ನೋಡು. ಮಹಾ ಪುರುಷ ನಚಿಕೇತನು ಜನಿಸುವ ಮಹಾದಿನವು ಸಮಿಾಪಿಸು ತ್ತಿರುವುದಲ್ಲವೆ? ಅವನು ಆತ್ಮತೇಜಸ್ಸಿನ ಅನಂತಧಾಮ ವನ್ನು ಸೇರಲು ಸಮಯವರಿತು ಸಹಾಯಮಾಡಿ ನಮ್ಮನ್ನು ಆನಂದಪಡಿಸಬೇಕು.

**ಪ್ರತೀಹಾರಿ:**—(ಪ್ರವೇಶಿಸಿ) ಹಿರಣ್ಯಗರ್ಭನಿಗೆ ನಮೋ ನಮಃ! ಯಮಧರ್ಮರಾಜನು ಬಿಜಯಮಾಡಿದ್ದಾನೆ.

**ಹಿರಣ್ಯಗರ್ಭ:**— **ಪ್ರವೇಶಿಸು.**

**ಪ್ರತೀಹಾರಿ:**—ಅಪ್ಪಣೆ. (**ಹೋಗುವನು. ಯಮಧರ್ಮರಾಜನಿಗೆ**

ಮಾರ್ಗದರ್ಶನಮಾಡುತ್ತ, ಸುವರ್ಣರಚಿತವಾದ ವೇತ್ರಹಸ್ತನಾಗಿ ಮತ್ತೆ ಪ್ರವೇಶಿಸುವನು.)

**ಯಮಧರ್ಮರಾಜ:**—(ಪ್ರವೇಶಿಸಿ ನಮಸ್ಕಾರಮಾಡಿ) ಜ್ಞಾನ ಭಕ್ತಿಗಳಿಂದ ಬೆಳಗದಿರುವ ದಾನ ತಪಸ್ಸುಗಳಿಗೆ ದೂರರಾಗಿರುವ ಸೃಷ್ಟಿಕರ್ತರಾದ ವಿಶ್ವಪೂಜ್ಯರಿಗೆ ನಮೋ ನಮಃ! ತಮ್ಮಿಮ್ಮರ ದರ್ಶನಲಾಭದಿಂದ ಕೃತಾರ್ಥನಾದೆನು; ಕೃತಾರ್ಥನಾದೆನು.

**ಹಿರಣ್ಯಗರ್ಭ:**—ಯಮಧರ್ಮರಾಜ! ನಿನ್ನ ವಿನಯವು ನಿನ್ನ ಸೌಶೀಲ್ಯಕ್ಕೆ ಒಪ್ಪವಿಡುವಂತಿದೆ. ನೀನು ಇಲ್ಲಿಗೆಬಂದ ಕಾರ್ಯಗೌರವವನ್ನು ತಿಳಿಯಬಹುದೆ?

**ಯಮಧರ್ಮರಾಜ:**—ಪ್ರಭುದೇವ! ಅನುಗೃಹೀತನಾದೆನು. ನಮ್ಮಲ್ಲಿ ಅತ್ಯಾಶ್ಚರ್ಯಕರವಾದ ಘಟನೆಯೊಂದನ್ನು ಕಂಡೆವು. ದಿವ್ಯತೇಜಸ್ಸೊಂದು ನರಕದಲ್ಲೆಲ್ಲ ಬೆಳಗಿಮಾಯವಾಯಿತು. ಅದರ ಪ್ರಕಾಶವು ಎಲ್ಲ ಗ್ರಹಮಂಡಲಗಳ ಪ್ರಭಾಮಾಲೆಗಿಂತ ಹೆಚ್ಚಾಗಿದ್ದರೂ, ಅದು ಕೇವಲ ಸುಖಮಯವಾಗಿ ಕಣ್ಣುಗಳಿಗೆ ಅಮೃತವರ್ತಿಯಂತೆ ತಂಪಿನ ತನಿರಸವನ್ನೆರೆಯುತ್ತಿದ್ದಿತು. (ಹಿರಣ್ಯಗರ್ಭ ಸರಸ್ವತಿಯರ ಹೊರತು ಉಳಿದವರೆಲ್ಲರೂ ಆಶ್ಚರ್ಯಚಕಿತರಾಗುವರು.)

**ಹಿರಣ್ಯಗರ್ಭ:**—(ಮಂದಸ್ಮಿತ ವದನಾರವಿಂದನಾಗಿ) ಯಮಧರ್ಮರಾಜ, ಅದನ್ನು ತಿಳಿಸಲು ಇಷ್ಟು ಆಯಾಸಪಟ್ಟು ಇಲ್ಲಿಗೆ ಬಂದೆಯಾ?

**ಯಮಧರ್ಮರಾಜ:**—ಒಂದು ವರವನ್ನು ಬೇಡಲು ಆನಂದದಿಂದ ಬಂದಿರುವೆನು.

**ಹಿರಣ್ಯಗರ್ಭ:**—ಯಾವ ವರವನ್ನು?

**ಯಮಧರ್ಮರಾಜ:**—ಪ್ರಭುದೇವ! ಸ್ವಾರ್ಥ ಸಾಧನೆಯ ಲವ ಲೇಶವೂ ಇಲ್ಲದೆ ಪರಹಿತಕ್ಕಾಗಿಯೇ ತನ್ನ ಜೀವನವನ್ನು ಧಾರೆಯೆರೆಯುವ ಮಹಾತ್ಮನೊಬ್ಬನ ಜನ್ಮಗ್ರಹಣವನ್ನು ಈ ತೇಜೋರಾಶಿಯು ಸೂಚಿಸಿರಬೇಕು. ಪ್ರಭುವೆ, ನಿನಗೆ ಸಮ್ಮತವಾದರೆ ಅವನು ಬೇಗನೆ ಜನಿಸುವಂತೆ ಅನುಗ್ರಹಿಸು. ಪರಾವಿದ್ಯೆಯ ದಿವ್ಯಪ್ರಭೆಯು ಅವನಿಂದ ಬೆಳಗುವಂತೆ ವರವನ್ನು ಅನುಗ್ರಹಿಸು. ಸಮಸ್ತ ಜೀವಿಗಳೂ ಪಾಪವಿಮುಖ ರಾಗಿ ವರ್ತಿಸುವಂತಾಗಬೇಕೆಂಬುದೇ ನನ್ನ ಪ್ರಾರ್ಥನೆ.

**ಹಿರಣ್ಯಗರ್ಭ:**—ಅಗ್ಗೆ ಯಾವ್ಯಪಟ್ಟದ ಆವಶ್ಯಕತೆಯೇ ಇಲ್ಲದೆ, ನಿನ್ನ ಪದವಿಗೇ ಸಂಚಕಾರ ಬರುವುದು. ನಿನಗೇ ಸ್ಥಾನ ಪಲ್ಲಟವಾಗುವ ದಿನವು ಸಮೀಪಿಸುವುದು. ಅಂತಹ ದಿನವು ಬರುವುದು ನಿನಗೆ ಸಮ್ಮತವೆ?

**ಯಮಧರ್ಮರಾಜ:**—ಅಂದಿನ ದಿನವೇ ಸುದಿನ. ಪಾಪಪರಾಙ್ಮು ಖತೆಯು ಒಂದೊಂದು ಹೆಜ್ಜೆ ಮುಂದುವರಿದರೆ ನನ್ನ ಹೃದಯದಲ್ಲಿ ಒಂದೊಂದು ಆನಂದ ತರಂಗವು ಹೆಚ್ಚುವುದು. ಸಮಸ್ತರ ಹೃದ್ಭಾವನೆಗಳೂ ವಿಶ್ವಪೂಜ್ಯರಾದ ತಮ್ಮಿರ್ವರಿಗೆ ಗೊತ್ತೇಇವೆ. ಈಗಿನ ನನ್ನ ಪದವಿಯಿಂದ ನಾನು ಸುಖಿಯಾ ಗಿಲ್ಲ, ಪ್ರಭು. ಪ್ರೇಯಃ ಪದಾರ್ಥವೇ ಸರ್ವಸ್ವವೆಂದು ಭಾವಿಸದೆ ಯಾರೊಬ್ಬರು ಪಾಪವಿಮುಖರಾದರೂ, ನನ್ನ ಅಧಿಕಾರದ ಅವಧಿಯು ಅಣುಮಾತ್ರ ಕಡಿಮೆಯಾಯಿತೆಂದು ಹಿಗ್ಗುವೆನು. ಅಜ್ಞಾನವಶದಿಂದ ಪ್ರಮಾದವನ್ನಾಚರಿಸಿ ಕೋಟ್ಯನುಕೋಟಿ ಜೀವಿಗಳು ಕಲ್ಪಿಸಿಕೊಂಡಿರುವ ಜನ್ಮದುಃಖ ಮರಣದುಃಖ ಶೃಂಖಲೆಗಳನ್ನೂ, ಮುಂದಿನ ದುರ್ದಶೆಯ ಭೀಕರ ಭವಿಷ್ಯ ವನ್ನೂ ನೋಡಿ ನೋಡಿ ಮರುಕಗೊಂಡು ಪರಿತಾಪ ಪಡುತ್ತಿದ್ದೇನೆ. ಯಾವ್ಯಪಟ್ಟದ ಅವಧಿಯು ಮುಗಿಯುವುದಕ್ಕೆ ಕಾರಣನಾಗುವ ಮಹಾತ್ಮನೇ ಜನ್ಮಧಾರಣೆಮಾಡಿ, ಪಾಪ

ಪರಾಙ್ಮುಖತೆಯು ಬೆಳಗುವಂತಾದರೆ, ಆಗ್ಗೆ ನನ್ನ ಆನಂದಕ್ಕೆ ಪಾರವುಂಟೆ ?

(ಹಿರಣ್ಯಗರ್ಭನೂ ವಾಣಿಯೂ ಮುಗುಳುನಗೆಯನ್ನು ಸೂಸುವರು. ಯಮನು ಕ್ಷಣಮಾತ್ರ ಸಂತೋಷವನ್ನು ಸೂಚಿಸಿ, ತಾನು ನುಡಿದುದೇನಾದರೂ ಅವಿವೇಕದ ಮಾತುಗಳಿರಬಹುದೇ-ಎಂದು ತೋರುವಂತೆ ಒಡನೆಯೇ ಕಳವಳವನ್ನು ಪ್ರದರ್ಶಿಸಿ ಚಿಂತಾಸಮಾಧಿ ಮಗ್ನನಾಗಿ ಚಿತ್ರದಂತೆ ನಿಲ್ಲುವನು. ಮಧ್ಯಾಹ್ನ ಸೂಚಕವಾದ ಭೇರೀ ಪಟಹ ತೂರ್ಯಸ್ವನಗಳು ಮೊಳಗುವುವು. ಒಡ್ಡೋಲಗವು ಮುಗಿದು ಯಮಧರ್ಮರಾಜನೊಬ್ಬನ ಹೊರತು ಮತ್ತೆಲ್ಲರೂ ಹೊರಟುಹೋಗುವರು. ನಾರದನು ಹಾಡುತ್ತ ಯಮಧರ್ಮರಾಜನ ಬಳಿಗೆ ಬಂದು "ಮಹಾನುಭಾವನಾದ ಯಮಧರ್ಮರಾಜನು ಸಮಾಧಿಮಗ್ನನಾಗಿ ಮೈಮರೆತಿದ್ದಾನೆ" ಎಂದು ಹೇಳಿ ಹೊರಟುಹೋಗುವನು. ಆ ಬಳಿಕಲೂ ಸ್ವಲ್ಪಕಾಲ ಯಮಧರ್ಮರಾಜನು ಹಾಗೆಯೇ ನಿಂತಿದ್ದು, ತರುವಾಯ ಭಾವಪಾರವಶ್ಯದ ಆನಂದೋನ್ಮತ್ತತೆಯನ್ನು ಸೂಚಿಸುವ ಮುಖಮುದ್ರೆಯಿಂದ ಕೂಡಿ "ಆ ಆನಂದದ, ಆ ಪದವಿಯ, ಆ ಮಹಾದಿನದ ದಿವ್ಯ ಪರಿಣಾಮ ! ಸೃಷ್ಟಿಯ ಸನ್ಮಂಗಳದ ಪರಾಕಾಷ್ಠತೆ" ಎನ್ನುವನು. ಕೂಡಲೆ ಚಕಿತನಾಗಿ ಬಹಿರ್ಮುಖನಾದಂತೆ ಸೂಚಿಸಿ, "ಪ್ರಭುದೇವ !" ಎಂದು ಸುತ್ತಲೂ ನೋಡುವನು. ಒಡ್ಡೋಲಗವು ಮುಗಿದು ತಾನು ಏಕಾಕಿಯಾಗಿರುವುದನ್ನು ಕಂಡು ವಿಸ್ಮಿತನಾಗಿ "ಎಂತಹ ಅಚಾತುರ್ಯವು ನನ್ನಿಂದ ನಡೆಯಿತು. ಒಡ್ಡೋಲಗವು ಮುಗಿದುದೇ ಗೋಚರವಿಲ್ಲದಷ್ಟು ಮೈಮರೆತಿದ್ದೆನು. ಪರಮೇಷ್ಠಿಯಲ್ಲಿ ಅಪಚಾರವಾಗಿರಬಹುದೆ ?" ಎಂದು ಹೇಳಿ ಒಂದೆರಡು ಕ್ಷಣಕಾಲ ಯೋಚಿಸಿ, ನಿರ್ಭರದ ಮುಖಮುದ್ರೆಯಿಂದ "ಬಾಹ್ಯವ್ಯಾಪಾರ ಶೂನ್ಯನಾಗಿದ್ದ ನನ್ನ ಹೃದಯದ ಸ್ಥಿತಿಯನ್ನು ದೇವನರಿಯನೆ ?" ಎನ್ನುವನು. ತೆರೆಯು ಬೀಳುವುದು)

## ದೃಶ್ಯ ೨

[ವಾಜಶ್ರವಸರ್ಷಿಯ ಆಶ್ರಮದಲ್ಲಿ ಪುಷ್ಪವಾಟಿಯ ಕಡೆಯಿಂದ ಪರ್ಣಶಾಲೆಗೆ ಹೋಗುವ ಮಾರ್ಗ.]

**ನಾರದ:**—(ಗಾನಮಾಡುತ್ತ ಪ್ರವೇಶಿಸಿ) ಪೂಜ್ಯಪಿತಾಮಹನಾದ ಹಿರಣ್ಯಗರ್ಭನು ನನ್ನಲ್ಲಿ ಅನುಗ್ರಹಮಾಡಿ ಎಂತಹ ಹಿತಕರವಾದ ಕರ್ತವ್ಯವನ್ನು ವಹಿಸಿರುವನು! ವತ್ಸ ನಚಿಕೇತನ ಮಾತೆಯಾದ ನಂದಿನೀದೇವಿಯು ಮೂರ್ತಿಮತಿಯಾದ ಸತ್ಕ್ರಿಯೆಯೋ ಎಂಬಂತೆ ಶೋಭಿಸುತ್ತಿರುವಳು. ಸುಲಭಕೋಪಿಯಾದ ವಾಜಶ್ರವಸರ್ಷಿಯು ತನ್ನ ತಂದೆಯಾದ ಉದ್ದಾಲಕ ಮಹರ್ಷಿಯಂತೆ ಉದಾತ್ತಚರಿತನಾಗಿದ್ದು ನಂದಿನೀದೇವಿಗೆ ತಕ್ಕ ಪತಿಯಾಗಿದ್ದರೆ ಎಷ್ಟು ಮನೋಜ್ಞವಾಗಿರುತ್ತಿದ್ದಿತು! ಅಥವಾ ಎಲ್ಲವೂ ನಾವು ಬಯಸಿದಂತೆಯೇ ನಡೆದರೆ ಜಗನ್ನಾಟಕವು ಮುಂದುವರಿಯುವ ಬಗೆ ಹೇಗೆ? (**ನೇಪಥ್ಯದ ಕಡೆಗೆ ನೋಡಿ**) ನಂದಿನೀದೇವಿಯು ವೃದ್ಧತಾಪಸಿಯೊಡನೆ ಈ ಮಾರ್ಗವಾಗಿಯೇ ಬರುತ್ತಿರುವಳು. ನಾನು ಅಗೋಚರನಾಗಿ ನಿಂತು ಧರ್ಮವೃದ್ಧೆಯಾದ ಆ ಯುವತಿಯ ಮಾತುಗಳನ್ನಾಲಿಸಿ ಆನಂದಿಸುವೆನು. (ಓರೆಯಾಗಿ ನಿಲ್ಲುವನು.)

(ಹೂವಿನಬುಟ್ಟಿಯೊಂದನ್ನು ಕೈಯಲ್ಲಿ ಹಿಡಿದು ಅದರೊಳಗಿರುವ ಹೂಗಳನ್ನು ನೋಡಿ ನೋಡಿ ಆನಂದಿಸುತ್ತಿರುವ ವೃದ್ಧತಾಪಸಿಯೂ, ನಂದಿನೀದೇವಿಯೂ, ಮಾತನಾಡುತ್ತ ಪ್ರವೇಶಿಸುವರು.)

**ತಾಪಸಿ:**—ಬಗೆಬಗೆಯ ಬಣ್ಣಗಳ ಹೂಗಳು! ಚೆಲುವಿನ ಸಿರಿಯನ್ನೆರಚುತ್ತಿರುವ ಹೂಗಳು! ಪರಿಮಳದ ಸಿರಿಬೀಡಿನಂತಿರುವ ಹೂಗಳು! ಇವು ದೊರೆತಿರುವುದರಿಂದ ನನ್ನ ಒಂದು ಮನಸ್ಸೇ ಹತ್ತು ಮನಸ್ಸಾಗಿ ಬಳೆದಂತೆ ಭಾವಿಸಿ ಭಕ್ತಿಯಿಂದ ದ್ಯಾವಾಪೃಥ್ವಿಯರಿಗೆ ಪೂಜೆಯನ್ನು ಸಮರ್ಪಿಸುವೆನು. ತಾಯಿ,

ನಾನು ಹೂಗಳನ್ನು ಯಾಚಿಸಿ ನಿಮ್ಮ ಮನೆಯಲ್ಲಿ ಪೂಜೆಗೆ ಹೂಗಳಿಲ್ಲದಂತೆ ಮಾಡಿದೆ.

**ನಂದಿನೀದೇವಿ:**—ಇನ್ನೂ ಹೂಗಳಿವೆ. ಇಷ್ಟಕ್ಕೂ ದೇವಮಾತಾ ಪಿತೃಗಳಿಗೆ ಯಾರ ಕೈಗಳಿಂದ ಪೂಜೆ ನಡೆದರೇನು? ನಿರಂತರವೂ ಬ್ರಹ್ಮವಾದಿನಿಯಾಗಿ ಪರಿಶುದ್ಧೆಯಾಗಿರುವ ಆರ್ಯೆಯ ಕೈಯಿಂದ ಪೂಜೆ ನಡೆಯುವುದೇಯುಕ್ತ. ಆರ್ಯೆಯು ನನ್ನಲ್ಲಿ ಅನುಗ್ರಹ ಮಾಡಿದಂತಾಯಿತು. ಪ್ರತಿದಿನವೂ ಇದೇರೀತಿ ಅನುಗ್ರಹವಾಗುವುದಾದರೆ ಈ ಆಶ್ರಮದಲ್ಲಿ ನಾವೆಲ್ಲರೂ ಧನ್ಯರಾಗುವೆವು.

**ತಾಪಸಿ:**—(ಆದರದಿಂದ ನಂದಿನಿಯ ಬೆನ್ನನ್ನು ಸವರಿ) ನಂದಿನಿ! (ನೀನು ನಿಜವಾಗಿಯೂ ನಂದಿನಿಯೇ ಆಗಿರುವೆ.) ಕ್ಷಾಮದ ದೆಸೆಯಿಂದ ಭೂಮಿಯೇ ದಹಿಸಿಹೋಗಿದೆ. ಎಷ್ಟು ಕಷ್ಟಪಟ್ಟರೂ ಕುಡಿಯುವ ನೀರು ದೊರೆಯುವುದೂ ಕಷ್ಟವಾಗಿದೆ. ಹೀಗಿದ್ದೂ ಅಷ್ಟೊಂದು ಗಿಡಗಳನ್ನು ಬೆಳೆಸಿರುವೆ. ಅವಕ್ಕೆ ನೀರೆರೆಯಲು ಎಷ್ಟು ಕಷ್ಟವಾಗಿರಬೇಕು!

**ನಂದಿನೀದೇವಿ:**—(ಸ್ವಲ್ಪ ನಕ್ಕು) ನಚಿಕೇತನು ಮಾತನಾಡುವ ಮಗುವಾದರೆ, ಆ ಗಿಡಗಳು ಮಾತನಾಡಲಾರದ ಮಕ್ಕಳೆಂದು ನನ್ನ ಮನಸ್ಸಿನ ಭಾವನೆ. ನಚಿಕೇತನಿಗೆ ಹೂಗಳನ್ನು ಕಂಡರೆ ಬಹಳ ಪ್ರೀತಿ; ಅವನ ಮುಖವು ಸಂತೋಷಕ್ಕೆ ಅರಳಿ, ಹೂಗಳ ಜೊತೆಗೆ ಹೂವಾಗುವುದು. ಎಲ್ಲಕ್ಕೂ ಮೇಲಾಗಿ ಪೂಜೆಗೆ ಹೂಗಳು ಬೇಕು.

**ತಾಪಸಿ:**—ನಂದಿನಿ ನೀನು ಧನ್ಯಾತ್ಮಳು. ಸ್ವಂತ ಕಷ್ಟವನ್ನೂ ಗಮನಿಸದೆ ಈ ಘೋರಕ್ಷಾಮದಲ್ಲಿಯೂ ಹೂಗಿಡಗಳನ್ನು ಪೋಷಿಸುತ್ತಿರುವೆ.

**ನಚಿಕೇತ:**—(ಕೈಯಲ್ಲಿ ಎಳೆಯ ಗರಿಕೆಯನ್ನೂ, ಒಂದು ಹೂವನ್ನೂ ಹಿಡಿದು ಪ್ರವೇಶಿಸಿ) ಅಮ್ಮಾ, ಅಮ್ಮಾ, ನಾನು ಅಲ್ಲಿದ್ದಾಗಲೇ ನೀನು ಬಂದಿದ್ದೀಯೆ. ಅಮ್ಮಾ, ಅಮ್ಮಾ, ನಾನೂ ಒಂದು ಹೂವಾಗಬೇಕಮ್ಮ. ಹೂವಾಗುವುದು ಹೇಗಮ್ಮ?

**ತಾಪಸಿ:**--(ಸಂತೋಷದಿಂದ) ಏಕೆ ಹೂವಾಗಬೇಕು, ನಚಿಕೇತ?

**ನಚಿಕೇತ:**—ಹೂವು ಸದಾ ನಗುತ್ತಲೇ ಇರುತ್ತದೆ. ಹೂವಿನಲ್ಲಿ ಒಳ್ಳೆಯ ವಾಸನೆಯಿರುತ್ತದೆ. ಹೂವು ದೇವರ ಪೂಜೆಗೆ ಬೇಕಾಗುತ್ತದೆ. ಆಮೇಲೆ ಅದು ಅಮ್ಮನ ಜಡೆಯಮೇಲಿರುತ್ತದೆ. ನಾನೊಂದು ಹೂವಾಗಬೇಕು. (ನಂದಿನಿಯೂ ತಾಪಸಿಯೂ ಆನಂದವನ್ನು ಸೂಸುವರು.)

**ನಾರದರು:**—ನಚಿಕೇತನ ಮನಸ್ಸು ದಿನದಿನವೂ ಅರಳಿ ಪೃಥ್ವೀದೇವಿಯ ಸಿರಿಮುಡಿಗೆ ಯೋಗ್ಯವಾದ ಪುಷ್ಪವಾಗುವಂತೆ ಭಗವಾನ್ ಹಿರಣ್ಯಗರ್ಭನು ಅನುಗ್ರಹಿಸಲಿ.

**ನಚಿಕೇತ:**—(ಆನಂದಭರದಿಂದ) ನಾನೊಂದು ಹೂವಾಗಿ, ನೀನು ಅದನ್ನು ಪೂಜೆಗೆ ಉಪಯೋಗಿಸಿದರೆ ಎಷ್ಟು ಸೊಗಸಮ್ಮ! ನಾನು ಹೂವಾಗಬೇಕಮ್ಮ. ನಾನು ತುಂಬ ಹೂಗಳಾಗಿ ಎಲ್ಲರ ಮನೆಯ ಪೂಜೆಗೂ ಸಿದ್ಧವಾಗಬೇಕಮ್ಮ.

**ನಂದಿನೀದೇವಿ:**—(ನಗುತ್ತ) ನೀನು ನನ್ನ ಮುದ್ದು ಹೂವಪ್ಪ; ಆಗಲಪ್ಪ.

**ತಾಪಸಿ:**—(ನಗುತ್ತ) ನೀನು ಹೂವಾಗಲು ನಂದಿನಿಯು ಒಪ್ಪಿದಳಲ್ಲಪ್ಪ. ಹುಲ್ಲುಗರಿಕೆಯೇಕೆ ನಚಿಕೇತ?

**ನಚಿಕೇತ:**— ನನ್ನ ಪುಟ್ಟ ಜಿಂಕೆಯಮರಿಗೆ. ಅಮ್ಮ ನನಗೆ ತಾಯಿ. ನಾನು ಅದಕ್ಕೆ ತಾಯಿ. ನಾನೂ ಒಳ್ಳೆಯ

ತಾಯಿ. ಅದಕ್ಕೇ ಸೊಗಸಾದ ಎಳೆಯ ಗರಿಕೆಯನ್ನು ತಂದೆ. ಅಮ್ಮ ನನ್ನ ಮುದ್ದಿಸುವಂತೆಯೇ ನಾನೂ ಅದನ್ನ ಮುದ್ದಿಸಬೇಕೆಂತ ಆಸೆ.

**ನಂದಿನೀದೇವಿ:**—(ನಗುತ್ತ) ನಿನ್ನ ಮಾತುಗಳಿಗೆ ಕೊನೆಮೊದಲೇ ಇಲ್ಲ. ........ನಾನು ಅಗ್ನಿಪೂಜೆಗೆ ಅಣಿಮಾಡಬೇಕು.

(ಮೂವರೂ ಹೋಗುವರು.)

**ನಾರದ:**—ಪ್ರೇಮಮಯಿಯಾದ ನಂದಿನೀದೇವಿಯು ಆಶ್ರಮಕ್ಕೇ ಅಲಂಕಾರಪ್ರಾಯಳಾಗಿದ್ದಾಳೆ. ವಿಶ್ವಪ್ರೇಮವು ನಚಿಕೇತನ ಹೃದಯದಲ್ಲಿ ಅಂಕುರಿಸಿ ಬೆಳೆಯುತ್ತಿದೆ. (ಮುಂದಿನ ಬೆಳೆಯ ಸಿರಿಯನ್ನು ಇಂದಿನ ಮೊಳಕೆಯೇ ಸೂಚಿಸುತ್ತಿದೆ.) ಹಿರಣ್ಯಗರ್ಭ! ನಿನ್ನ ಲೀಲೆಯನ್ನು ಬಲ್ಲವರಾರು?

(ಹಾಡುತ್ತ ಹೊರಟುಹೋಗುವನು.)

## ದೃಶ್ಯ ೩

[ವಾಜಶ್ರವಸರ್ಷಿಯ ಪರ್ಣಶಾಲೆಯ ಒಳಗಿನ ಒಂದುಭಾಗ. ಗೋಡೆಯಮೇಲೆ ಒಂದುಕಡೆ (ಬಿದಿರಿನಿಂದ ಮಾಡಿದ) ಹೂವಿನ ಬುಟ್ಟಿಗಳೂ, ಕಂದಮೂಲಗಳ ಕುಕ್ಕೆಗಳೂ, ನೇತುಹಾಕಲ್ಪಟ್ಟಿರುವುವು. ಮತ್ತೊಂದು ಗೂಟದಲ್ಲಿ ವಸ್ತ್ರಗಳೂ ಜಪಮಾಲೆಗಳೂ ರುದ್ರಾಕ್ಷಿಯ ಸರಗಳೂ ತೂಗಾಡುತ್ತಿರುವುವು. ಮತ್ತೊಂದು ಗೂಟದಲ್ಲಿ ಸ್ರುಕ್ಸ್ರುವಗಳು ನೇತಾಡುತ್ತಿರುವುವು. ವೇದಿಯ ಬಳಿಯಲ್ಲಿ ತ್ರೇತಾಗ್ನಿಯು ರಾಜಿಸುತ್ತಿರುವುದು. ಅಗ್ನಿಯ ಬಳಿಯಲ್ಲಿ ನಂದಾ ದೀವಿಗೆಗಳು ಉರಿಯುತ್ತಿರುವುವು. ಅಲ್ಲಲ್ಲಿ ಕೆಲವು ಮಣ್ಣಿನ ಮತ್ತು ಮರದ ಪಾತ್ರೆಗಳು. ನೆಲದಮೇಲೆ ಅಲ್ಲಲ್ಲಿ ಕೃಷ್ಣಾಜಿನಗಳು. ಒಂದುಕಡೆ ವ್ಯಾಘ್ರಾಜಿನದಮೇಲೆ ವ್ಯಾಸಪೀಠ. ಅದರಮೇಲೊಂದು ಓಲೆಯಗರಿಯ ಪುಸ್ತಕ. ನಂದಿನೀದೇವಿಯು ಹಾಡನ್ನು ಹೇಳುತ್ತ, ಅಗ್ನಿಗೆ ಹಿತ್ತಾಳೆಯ ಸೊಡರುಗಳ ಆರತಿಯನ್ನೆತ್ತುತ್ತಿರುವಳು.]

**ನಂದಿನೀದೇವಿ:**—(ಆರತಿಯನ್ನು ಮುಗಿಸಿ) ಅಗ್ನಿದೇವ! ನೀನು ದೇವಪ್ರಿಯನು. ಮಾನವರ ಪ್ರಿಯದೈವವು. ಹೀಗಿದ್ದೂ ಎಂತಹ ಘೋರವಾದ ಕ್ಷಾಮವನ್ನು ತಂದಿಟ್ಟು ಮನುಷ್ಯರ ಕಷ್ಟಗಳನ್ನು ನೋಡುತ್ತಿರುವೆ! ನಿನಗೆ ಸಮರ್ಪಿಸುವುದಕ್ಕೆ ಕೂಡ ಫಲಗಳಿಲ್ಲ. ಅವಕ್ಕೆ ಬದಲಾಗಿ ಹೂಗಳನ್ನರ್ಪಿಸಿ ತೃಪ್ತಿಹೊಂದಬೇಕಾಯಿತು. ಪೃಥ್ವೀದೇವಿ! ಪೃಥುಚಕ್ರವರ್ತಿಯ ಕಾಲದಲ್ಲಿ ಕ್ಷಾಮವು ಸಂಭವಿಸಿದ್ದಾಗ ಗೋರೂಪವನ್ನು ಧರಿಸಿದ್ದ ನೀನು ಕ್ಷೀರವನ್ನು ಎಲ್ಲೆಲ್ಲಿಯೂ ಸ್ರವಿಸಿ ಸಸ್ಯ ಸಮೃದ್ಧಿಮಾಡಿದೆಯಲ್ಲವೆ? ಆಗ ಭೂಮಿಯೇ ನಿನ್ನ ಸ್ತನ್ಯದಿಂದ ಸಸ್ಯಶಾಲಿನಿಯಾಯಿತಲ್ಲವೆ! ನೀನೂ ದ್ಯಾವೀರ್ದವನೂ ದೇವ ಮಾತಾಪಿತೃಗಳು. ಈ ಜಗತ್ತಿಗೂ ನೀವೇ ತಾಯಿತಂದೆಗಳು. ದೇವಿ! ಹಿಂದೆ ಆಚರಿಸಿದಂತೆಯೇ ಪವಿತ್ರವಾದ ನಿನ್ನ ಸ್ತನ್ಯಪ್ರದಾನದಿಂದ ಸಸ್ಯ ಸಮೃದ್ಧಿಮಾಡಿ

ಜಗತ್ತನ್ನುದ್ಧರಿಸಬಾರದೆ! ನನ್ನ ಮುದ್ದುಮಗು ನಚಿಕೇತನು "ಅಮ್ಮಾ, ಹಸಿವು" ಎಂದು ಕೂಗಿಕೊಂಡು ಬಂದರೆ, ಏನನ್ನು ಕೊಡಲಿ? ಏನೆಂದು ಉತ್ತರ ಹೇಳಲಿ? ಮನೆಯಲ್ಲಿದ್ದುದೆಲ್ಲವನ್ನೂ ನಿಶ್ಶೇಷವಾಗಿ ನಿನ್ನ ಕ್ಷಾಮಪೀಡಿತರಿಗೆ ಕೊಟ್ಟು ನಿನಗೆ ಪ್ರೀತಿಯಾಗಲೆಂದು ಕೈಮುಗಿದೆನಲ್ಲವೆ? ಈಗ ಮನೆಯಲ್ಲಿ ಧಾನ್ಯ ಮುಂತಾದುದೇನೂ ಉಳಿದಿಲ್ಲ. ಪೃಥ್ವೀದೇವಿ! ಕೃಪಾಮಯಿ! ಉದ್ಧಾರಮಾಡು.

**ನಚಿಕೇತ:**—(ಪ್ರವೇಶಿಸಿ) ಅಮ್ಮಾ, ಅಮ್ಮಾ.

**ನಂದಿನೀದೇವಿ:**—ಏನು, ಕಂದ?

**ನಚಿಕೇತ:**—ಅಮ್ಮ, ಅಗ್ನಿದೇವರ ಪೂಜೆಯಾಯಿತೆ?........ಇದೋ ಆಗಿದೆ........ನನಗೆ ಪ್ರಸಾದ. ನಿನ್ನೆಯಂತೆ ನೈವೇದ್ಯದ ಹಣ್ಣು ಕೊಡಮ್ಮ. ಹೊಟ್ಟೆಯಲ್ಲಿ ಏನೋ ಆಗುತ್ತಮ್ಮ. ಏನೋ ಆಗುತ್ತೆ........(ಅಳುವನು)

**ನಂದಿನೀದೇವಿ:**—(ಸ್ವಗತ) ಜಗಜ್ಜನನೀ, ಪೃಥ್ವೀದೇವಿ! ಈ ಹಸಿವಿನ ಸಂಕಟವನ್ನು ಹೇಗೆ ನೋಡಲಿ! (ಪ್ರಕಾಶ) ಕಂದ! ನಚಿಕೇತ! (ಮಗುವನ್ನು ಸಂತೈಸಿ ಸಮಾಧಾನಮಾಡಿ) ಇನ್ನು ಕೊಂಚ ಹೊತ್ತಿಗೇ ದೇವರು ಆಹಾರವನ್ನು ಕಳುಹಿಸುತ್ತಾನಪ್ಪ. ದ್ಯಾವಾಪೃಥ್ವಿಯರು ಕರುಣದಿಂದ ಕಾಣುವರಪ್ಪ. ಸ್ವಲ್ಪ ತಾಳು, ಕಂದ. ನೀನು ಜಾಣ. ನೀನು ತುಂಬ ಜಾಣ.

**ನಚಿಕೇತ:**—ನೀನು ಬೆಳಗಿನಿಂದಲೂ ಹೀಗೆಯೇ ಹೇಳುತ್ತೀಯಮ್ಮ. ದೇವರು ಇನ್ನೂ ಏಕೆ ಕಳುಹಿಸಲಿಲ್ಲ?

**ನಂದಿನೀದೇವಿ:**—ನಮಗಿಂತಲೂ ಹಸಿವಾಗಿರುವವರ[illegible] ಮೊದಲು ಹಾಲನ್ನೂ ಹಣ್ಣುಗಳನ್ನೂ ತಂದುಕೊಟ್ಟು, ಆಮೇಲೆ ನಮಗೆ ತಂದುಕೊಡಬೇಕು; ಆಮೇಲೆ ನಮಗೆ.

**ನಚಿಕೇತ:**—ನಮಗಿಂತಲೂ ಹಸಿವಾದವರೂ ಇದ್ದಾರೇನಮ್ಮ?

**ನಂದಿನೀದೇವಿ:**—ಇದ್ದಾರಪ್ಪ.

**ನಚಿಕೇತ:**—ಅಯ್ಯೋ ಪಾಪ! ನಾನು ಇನ್ನು ಅಳುವುದಿಲ್ಲಮ್ಮ. ಹೊರಬಾಗಿಲಿನಲ್ಲೇ ನಿಂತುಕೊಂಡು, ದೇವರು ಕಳುಹಿಸುವುದನ್ನೇ ನೋಡುತ್ತಿರುತ್ತೇನೆ.

**ನಂದಿನೀದೇವಿ:**—(ಅವನಿಗೆ ಕಾಣದಂತೆ ಮುಖವನ್ನು ಹಿಂಡಿಕೊಂಡು, ಆ ಬಳಿಕ ಸಂತೋಷವನ್ನು ನಟಿಸಿ ಅವನಿಗೆ ಮುತ್ತಿಟ್ಟು) ಚಿನ್ನದಂಥ ಮಗು. ಹಾಗೇ ಮಾಡು ಕಂದ. (ನಚಿಕೇತನು ಹೋಗುವನು. ತನ್ನ ಪತಿಯಾದ ವಾಜಶ್ರವಸರ್ಷಿಯು ಬಂದುದನ್ನು ಕಂಡು, ನಂದಿನಿಯು ನಮಸ್ಕರಿಸುವಳು.)

**ವಾಜಶ್ರವಸ:**—ಸಾಕು, ಮೇಲಕ್ಕೇಳು, ನಮಸ್ಕಾರದಿಂದ ಹೊಟ್ಟೆ ತುಂಬುವುದಿಲ್ಲ.

**ನಂದಿನೀದೇವಿ:**—ಇನ್ನೂ ಅಸಮಾಧಾನವು ಹೋಗಲಿಲ್ಲವೆ?

**ವಾಜಶ್ರವಸ:**—ನಾನು ಬಹು ಶ್ರಮಪಟ್ಟು ಆಹಾರ ವಸ್ತುಗಳನ್ನು ಸಂಗ್ರಹಿಸಿದ್ದೆ. ಈಗ ನೆಲವೇ ಬೆಂದುಹೋಗಿದೆ. ಆಹಾರ ವಸ್ತುಗಳು ದೊರೆಯುವುದು ಕಷ್ಟವಾಗಿದೆ. ಅದರ ಯೋಚನೆಯೇ ಇಲ್ಲದೆ ನೀನು ಎಲ್ಲವನ್ನೂ ಕೊಟ್ಟೆ.

**ನಂದಿನೀದೇವಿ:**—ಮನ್ನಿಸಿ..............ಅಯ್ಯೋ! ಕ್ಷಾಮಪೀಡಿತರ ಒಂದು ದೊಡ್ಡ ಗುಂಪು..........ಅವರ ಸಂಕಟವನ್ನು ನೋಡಿ ಸೈರಿಸಲಾರದೆ ಹೋದೆ. ಯಾವ ಯೋಚನೆಯೂ ಇಲ್ಲದೆ ಒಡನೆಯೇ ಎಲ್ಲವನ್ನೂ ಅವರಿಗೆ ಕೊಟ್ಟು ಕೃತಾರ್ಥಳಾದೆ.

**ವಾಜಶ್ರವಸ:**—ಹೌದು. ಕೃತಾರ್ಥಳಾದೆ. ಈ ದಿನ ನಾನೂ ಹಸಿವಿನ ಬಾಧೆಯಿಂದ ಕಂಗೆಟ್ಟು, ನಿನ್ನನ್ನೂ ನಚಿಕೇತನನ್ನೂ ಹಸಿವಿನ ಬಾಧೆಯಲ್ಲಿ ನರಳಿಸಿ ಕೃತಾರ್ಥನಾಗಬೇಕಾಗಿದೆ.

**ನಂದಿನೀದೇವಿ:**—ನಿಮ್ಮ ಸಮಾಧಾನಕ್ಕಾಗಿ ಬೇಕಾದರೆ ಸರ್ವಾಪರಾಧವಾಯಿತೆನ್ನುತ್ತೇನೆ. (ಅಳುತ್ತ) ಆದರೆ, ನಾನು ಯಾವ ತಪ್ಪನ್ನೂ ಮಾಡಿಲ್ಲ.

**ವಾಜಶ್ರವಸ:**—ನೀನು ನನ್ನ ಮನಸ್ಸಿನ ಭಾವವನ್ನೇ ಗ್ರಹಿಸದೆ ಅಳುತ್ತಿರುವೆ. (ಸ್ವಲ್ಪ ನಕ್ಕು) (ಅಳುವಿನ ಅಸ್ತ್ರವನ್ನು ಪ್ರಯೋಗಿಸುವುದರಲ್ಲಿ ಸ್ತ್ರೀಯರು ಚದುರೆಯರು.)

**ನಂದಿನೀದೇವಿ:**—(ಅಳುವಿನ ಮಧ್ಯದಲ್ಲಿ ನಗುತ್ತ) ಸ್ತ್ರೀಯರು ಅಳುವಂತೆ ಮಾಡುವುದರಲ್ಲಿ ಪುರುಷರೂ ಚದುರರು. ನಿನ್ನೆ ಅಷ್ಟುಮಂದಿ ಹಸಿವಿನಿಂದ ಬಾಧೆಪಡುತ್ತ ಬಂದುದನ್ನು ಕಂಡಾಗ ನನ್ನ ಪ್ರಾಣವೇ ಹಾರಿಹೋದಂತಾಯಿತು. ಹೊಟ್ಟೆಗಿಲ್ಲದವರ ಕಾತರ ಸ್ವರವು ದೇವಮಾತೆಯಾದ ಪೃಥ್ವೀದೇವಿಯ ಕಿವಿಗೇಕೆ ಬೀಳುವುದಿಲ್ಲವೆನ್ನಿಸಿತು. ನಾನು ಮನೆಯಲ್ಲಿದ್ದುದನ್ನೆಲ್ಲವನ್ನೂ ಕೊಟ್ಟು ಭಗವಂತನಿಗೆ ಪ್ರೀತಿಯಾಗಲೆಂದು ಕೈಮುಗಿದೆ. ನಚಿಕೇತನಿಗೂ ಈ ದಿನಕ್ಕೆ ನಾನು ಏನನ್ನೂ ಉಳಿಸಲಿಲ್ಲ. ನಾನು ಆಹಾರವಿಲ್ಲದೆ ಕೃಶಳಾಗಿ ಗರ್ಭದಲ್ಲಿರುವ ಮಗುವನ್ನು ಕೊರಗಿಸಲು ನನಗೆ ಅಧಿಕಾರವಿಲ್ಲವೆಂಬುದನ್ನೂ ಗಮನಿಸಲಿಲ್ಲ. ಹೀಗೆ ಹುಚ್ಚಿಯಂತೆ ಎಲ್ಲವನ್ನೂ ಕೊಡಬೇಕಾದರೆ, ನನ್ನ ಮನಸ್ಸಿಗೆ ಆ ಬಡಪಾಯಿಗಳ ಕಷ್ಟವನ್ನು ಕಂಡು ಹೇಗಾಗಿರಬೇಕೋ ಯೋಚಿಸಿ. ನೀವೇ ಮನೆಯಲ್ಲಿದ್ದು ಅವರನ್ನು ನೋಡಿದ್ದರೆ, ಹೀಗೆನ್ನುತ್ತಿರಲಿಲ್ಲ.

**ವಾಜಶ್ರವಸ:**—ಇಲ್ಲಿ ಜೀವನ ನಡೆಯುವುದು ಬಹುಕಷ್ಟ. ನಾನು ರಾಜಪುರೋಹಿತನಾಗಲು ಬರಬೇಕೆಂದು ರಾಜನು ಪದೇ ಪದೇ ಹೇಳಿಕಳುಹಿಸುತ್ತಲೇ ಇದ್ದಾನೆ. ನಿನ್ನೆ ಕೂಡ ಓಲೆಯು ಬಂದಿದೆ. ನಾನು ಒಪ್ಪಕೂಡದೆಂದು ನೀನು ಅಡಿ ಮಾಡುವುದೇಕೆ?

**ನಂದಿನೀದೇವಿ:**—ನಮ್ಮ ಕುಲದವರಂತೆ ನೀವೂ ತಪೋಧನರಾಗಿ ಬಾಳಬೇಕೆಂಬ ಆಸೆಯಿರುವುದರಿಂದ........

**ವಾಜಶ್ರವ:**—ಆಗಿನ ಸ್ಥಿತಿಯೇ ಬೇರೆ. ಈಗ ಆಪತ್ಕಾಲವು ಒದಗಿದೆ. ದುರ್ಭಿಕ್ಷವೂ, ಕ್ಷಾಮವೂ, ಎಂದಿಗೆ ನಿವಾರಣೆಯಾಗುವುವೋ ತಿಳಿಯದು. ಈ ಸಮಯಕ್ಕೆ ಸರಿಯಾಗಿ ನಾನು ಪುರೋಹಿತನಾಗಿ ಬರಬೇಕೆಂದು ರಾಜನೂ ಆಹ್ವಾನಿಸಿದ್ದಾನೆ. ಹಿಂದೆ ನಮ್ಮ ತಂದೆಯು ತನ್ನ ಪ್ರಾರ್ಥನೆಯನ್ನು ಸಲ್ಲಿಸಲಿಲ್ಲವೆಂಬುದನ್ನು ಸೂಚಿಸಿ, ನಾನಾದರೂ ರಾಜಪುರೋಹಿತನಾಗಿರಲು ಸಮ್ಮತಿಸಬೇಕೆಂದು ಪ್ರಾರ್ಥಿಸಿದ್ದಾನೆ.

**ನಂದಿನೀದೇವಿ:**—ರಾಜಪುರೋಹಿತರಾಗಿ ಸುಖಪಡುವುದಕ್ಕಿಂತ, ಕಷ್ಟಪಟ್ಟು ತಪೋಧನರಾಗುವುದು ಹೆಚ್ಚಿನ ಸಿದ್ಧಿ.

**ವಾಜಶ್ರವಸ:**—ನೀನು ಅಡ್ಡಿ ಮಾಡುತ್ತಿರುವುದನ್ನು ನೋಡಿ ನೋಡಿ, ನನಗೆ ತಾಳ್ಮೆಯೇ ತಪ್ಪುತ್ತಿದೆ. ನಿರ್ಧರವಾಗಿ ಹೇಳುವೆನು. ಆಲಿಸಿ ಕೇಳು. ಇಲ್ಲಿದ್ದು ಇನ್ನು ಜೀವಿಸಿರುವ ಆಸೆಯಿಲ್ಲ. ಭೂಮಿಯೇ ಬೆಂದುಹೋಗಿದೆ. ಹೊಟ್ಟೆಗಿಲ್ಲದಂತೆ ಮಾಡಿ ನಿಮ್ಮನ್ನು ಸೊರಗಿಸಲು ನನಗೆ ಅಧಿಕಾರವಿಲ್ಲ. ರಾಜನ ಆಹ್ವಾನವು ಬಂದಿದೆ. ವಿಶ್ವಜಿದ್ಯಜ್ಞಕ್ಕಾಗಿ ಧನ ಸಂಗ್ರಹಮಾಡುವ ಅಭಿಲಾಷೆಯೂ ನನ್ನನ್ನು ಆವರಿಸಿದೆ. ರಾಜಪುರೋಹಿತನಾಗುವುದೇ ಸರಿಯೆಂದು ನಿರ್ಧರಿಸಿದ್ದೇನೆ.

**ನಂದಿನೀದೇವಿ:**—ಹಿರಿಯರೊಬ್ಬರೂ ರಾಜಪುರೋಹಿತರಾಗಿ ರಾಜಧಾನಿಗೆ ತೆರಳಲು ಸಮ್ಮತಿಸದೆ ಹೋದುದಕ್ಕೆ ಕಾರಣವೇನೆಂಬುದನ್ನಾದರೂ ಯೋಚಿಸಿ ನೋಡಿ. ರಾಜನೂ ಮಹಾನುಭಾವ. ಹಿರಿಯರಂತೆಯೇ ನೀವೂ ತಪೋಧನರಾಗಿದ್ದೀರೆಂದು ಭಾವಿಸಿ ಹೀಗೆ ಪ್ರಾರ್ಥಿಸಿದ್ದಾನೆ.

**ವಾಜಶ್ರವಸ:**—ನಿನ್ನ ವಿಚಿತ್ರವಾದ ಮನೋವೃತ್ತಿಯನ್ನು ಕಂಡು ನನಗೆ ನಗುಬರುವುದು. ನನಗಿನ್ನೂ ಪೂರ್ವವಯಸ್ಸು. ನನ್ನ ವಿದ್ಯೆಯೂ, ವೇದಾಧ್ಯಯನವೂ, ಶೋಭಿಸಬೇಕೆಂದು ನನಗೆ ಇಷ್ಟ. ಕ್ಷಾಮದ ಜ್ವಾಲೆಯು ತಗುಲದಂತೆ ನಿಮ್ಮನ್ನು ರಕ್ಷಿಸಬೇಕೆಂದು ನನಗೆ ಆಸೆ. ವಿಶ್ವಜಿದ್ಯಜ್ಞವನ್ನಾಚರಿಸಿ ಸ್ವರ್ಗಸುಖಕ್ಕೆ ಸೋಪಾನಮಾರ್ಗವನ್ನು ಕಲ್ಪಿಸಿಕೊಳ್ಳ ಬೇಕೆಂದು ತೀವ್ರಾಭಿಲಾಷೆ. ರಾಜಪುರೋಹಿತನಾಗುವುದೇ ಅದಕ್ಕೆ ಬೇಕಾದ ದ್ರವ್ಯಾರ್ಜನೆಗೆ ರಾಜಮಾರ್ಗ. ರಾಜ ಪುರೋಹಿತನಾಗಿದ್ದೂ ನಾನು ಸನ್ಮಾರ್ಗದಲ್ಲೇ ಇರುವೆನು. ನಿಮ್ಮೆಲ್ಲರೊಡನೆ ಸುಖವಾಗಿ ಬಾಳುವೆನು.

**ನಂದಿನೀದೇವಿ:**---ನಿಮ್ಮ ಮನಸ್ಸನ್ನು ಸರ್ವಮಂಗಳೆಯಾದ ಪೃಥ್ವೀ ದೇವಿಯೇ ಮಾರ್ಪಡಿಸಬೇಕು.

**ವಾಜಶ್ರವ:**—(ಸ್ವಲ್ಪ ಅಸಮಾಧಾನವನ್ನು ಸೂಚಿಸಿ) ಆಗಲಿ........... ಜ್ವಾಲಾಮುಖಿಯಂತೆ ಕ್ಷಾಮವು ಈಗ ಜ್ವಾಲೆಯನ್ನು ಚಾಚಿ ನಿಂತಿದೆ. ನಾವು ಆಶ್ರಮವನ್ನೇ ನಂಬಿಕೊಂಡು ಇಲ್ಲೇ ನಿಂತರೆ ರಕ್ಷಿಸುವವರಾರು ?

**ನಂದಿನೀದೇವಿ:**—ಹಿಂದೆ ಅನ್ನದಾನದ ವಂಶವೆಂದು ಪ್ರಸಿದ್ಧ ವಾಗಿದ್ದ ಮನೆತನದವರಿಂದ ಈ ಮಾತೆ? ನಮ್ಮನ್ನು ರಕ್ಷಿಸು ವವನು ಪರಮಾತ್ಮನು. ನಾವು ಜನರಲ್ಲಿ ಭರವಸೆಯಿಡು ವೆವು. ಆದರೆ ಜಗದೀಶ್ವರನಾದ ಹಿರಣ್ಯಗರ್ಭನನ್ನು ನಂಬಿ ಭರವಸೆಯಿಂದಿರಲಾರೆವು. ನಮ್ಮ ದೌರ್ಬಲ್ಯಕ್ಕೆ ತಕ್ಕ ಫಲ ವನ್ನನುಭವಿಸುವೆವು.

**ವಾಜಶ್ರವ:**—ಹಾಗಾದರೆ, ಭಗವಂತನೇ ನಮಗೆ ಆಹಾರವನ್ನೊದ ಗಿಸುವನೋ! ಹಿರಣ್ಯಗರ್ಭನೇ ಆಹಾರವನ್ನು ತಂದುಕೊಡು ವನೋ!

**ನಚಿಕೇತ:**—(ಸಂಭ್ರಮದಿಂದ ಪ್ರವೇಶಿಸಿ) ಅಮ್ಮಾ! ದೇವರು ಆಹಾರವನ್ನು ಕಳುಹಿಸುವನೆಂದು ಹೇಳಿದ್ದೆಯಲ್ಲಾ! ಬರುತ್ತಿದೆ. ಒಂದು ಬಿಂದಿಗೆ ಹಾಲು, ಗೂಡೆ ಗೂಡೆ ಹಣ್ಣುಗಳು, ಇನ್ನೂ ಏನೇನೋ ಬರುತ್ತಿವೆ. ತರುತ್ತಿದ್ದಾರೆ. (ಚಪ್ಪಾಳೆಹೊಡೆದು ಹಿಗ್ಗುತ್ತ) ಇನ್ನು ಬೇಕಾದಷ್ಟು ಕೊಡಬಹುದು. ನಿನ್ನೆಯಂತೆ ಆ ಹುಡುಗರುಬಂದರೆ, ಅವರಿಗೆ ಬೇಕಾದಷ್ಟು ಕೊಡಬಹುದು. (ನಗುವನು. ಕುಣಿಯುವನು.)

**ಆಳುಗಳು:**—(ಅವುಗಳೊಡನೆ ಪ್ರವೇಶಿಸಿ, ದಂಪತಿಗಳಿಗೆ ನಮಸ್ಕರಿಸಿ) ಹಸಿವನ್ನು ತಡೆಯಲಾರದೆ ನಿನ್ನೆ ನಿಮ್ಮಮನೆಗೆ ನುಗ್ಗಿದ ಜನರಿಗೆ ನೀವು ಮನೆಯಲ್ಲಿದ್ದುದನ್ನೆಲ್ಲಾ ಕೊಟ್ಟಿರಂತೆ. ಅವರು ನಗರಕ್ಕೂ ಬಂದು ಕಂಡವರಿಗೆಲ್ಲ ತಿಳಿಸಿ ಕೊಂಡಾಡಿದರು. ನಗರಾಧಿಕಾರಿಯು ಸುಪ್ರೀತರಾಗಿ "ಅನ್ನದಾನಿಗಳ ಮನೆತನದವರಿಗೆ ಈ ಅಲ್ಪಸೇವೆ" ಎಂದುಹೇಳಿ ಇವನ್ನು ಕಾಣಿಕೆಯಾಗಿ ಕೊಟ್ಟು ಬನ್ನಿರೆಂದು ಇವುಗಳನ್ನು ಈ ಆಶ್ರಮಕ್ಕೆ ಕಳುಹಿಸಿದ್ದಾರೆ. (ವಸ್ತುಗಳನ್ನು ಒಪ್ಪಿಸಿ ನಮಸ್ಕರಿಸಿ) ನಾವು ಹೊರಡುವೆವು. ತಮಗೆ ಅವರಿಂದ ಯಾವ ಕಾಣಿಕೆಯು ಬೇಕಾದರೂ ಹೇಳಿಕಳುಹಿಸಿ ಸೇವೆಯನ್ನು ಸಲ್ಲಿಸಿಕೊಳ್ಳಬೇಕಂತೆ. (ಹೊರಡಲನುವಾಗುವರು.)

**ವಾಜಶ್ರವಸ:**—ನಾನು ತುಂಬ ಉಪಕೃತನಾದೆನೆಂದು ಅವರಿಗೆ ತಿಳಿಸಿ.

**ನಂದಿನೀದೇವಿ:**—ಆರ್ಯರೆ! ಹರಿದಾರಿ ದೂರಪ್ರಯಾಣಮಾಡಿ ದಣಿದುಬಂದಿರುವಿರಿ. ಅಲ್ಪವಾದ ನಮ್ಮ ಸತ್ಕಾರವನ್ನು ಸ್ವೀಕರಿಸಿ ಹೊರಡಬೇಕೆಂದು ಕೋರುವೆನು.

**ಆಳುಗಳು:**—ನಾವು ಮತ್ತೊಮ್ಮೆ ಆ ಭಾಗ್ಯವನ್ನು ಪಡೆಯುವೆವು. ಈಗ ಅವಕಾಶವಿಲ್ಲ. ಕ್ಷಮಿಸಬೇಕು. (ಹೋಗುವರು)

**ನಂದಿನೀದೇವಿ:**—ಈಗ, ನಾನೊಂದುಮಾತನ್ನು ಬಿನ್ನವಿಸಲೆ ?

**ವಾಜಶ್ರವಸ:**— ನೀನು ಏನನ್ನು ಹೇಳುವೆಯೆಂಬುದನ್ನು ನಾನು ಬಲ್ಲೆ. ಅದು ನನಗೆ ಬೇಡ. ರಾಜನಕಡೆಯ ಅಧಿಕಾರಿಯಿಂದ ಉಪಕೃತರಾದೆವು. ರಾಜನಿಂದಲೇ ಮನ್ನಣೆ ದೊರೆಯುವ ಅವಕಾಶವು ಒದಗಿದೆ. ಅದನ್ನು ಉಪಯೋಗಿಸಿಕೊಂಡು ಸುಖವಾಗಿದ್ದು, ಕ್ಷಾಮವು ಹೋದಮೇಲೆ ಆಶ್ರಮಕ್ಕೆ ಬಂದರೂ ಬರೋಣ.

**ನಂದಿನೀದೇವಿ:**—(ನಚಿಕೇತನಿಗೆ ಆದರದಿಂದ ಹಣ್ಣನ್ನು ಕೊಟ್ಟು) ನನ್ನ ಮಾತುಗಳಿಂದ ತಮಗೆ ಅಸಮಾಧಾನವಾಗಿದ್ದರೆ ಮನ್ನಿಸಿ. ಪೃಥ್ವೀದೇವಿ ! ಸರ್ವಮಂಗಳೆ! ನೀನು ಎಷ್ಟು ಕರುಣೆಯುಳ್ಳವಳು ! (ಹಸಿವಿನ ಬಾಧೆಯಿಂದ ಚೀರಿಡುವ ಜನರ ಕೂಗು ಕೇಳಿಸುವುದು.) ಅಯ್ಯೋ ! ಹೊಟ್ಟೆಗಿಲ್ಲದವರ ಗೋಳಾಟ. ನಿನ್ನೆಯಂತೆಯೇ ಈ ದಿನವೂ ಇಲ್ಲಿಗೆ ಬಂದಿರುವ ರೆಂದು ತೋರುವುದು. ಸಂತೋಷ................ಭಗವತಿ ! ಆದಷ್ಟನ್ನೂ ನಿನ್ನಸೇವೆಗೇ ಅರ್ಪಿಸುವೆನು ! ಹತ್ತಾರು ಕೈಗಳಿಂದ ಕೊಡಿಸುವವಳೂ ನೀನೆ. ಹತ್ತಾರು ಬಾಯಿಗಳಿಂದ ಕವಳಿಸುವವಳೂ ನೀನೆ.

[ದೇವಿಯನ್ನು ಪ್ರಾರ್ಥಿಸುವಳು.]

(ತೆರೆಯು ಬೀಳುವುದು.)

## ದೃಶ್ಯ ೪

[ರಾಜಪುರೋಹಿತ ವಾಜಶ್ರವಸರ್ಷಿಯ ಮನೆಯ ಮುಂದಿನ ಬಯಲು. ನೂತನ ವಟುವಾದ ನಚಿಕೇತನೂ, ಅವನ ತಂದೆಯೂ ಪ್ರವೇಶಿಸುವರು. ವಾಜಶ್ರವಸರ್ಷಿಯ ಹಿಂದೆ ಚಿನ್ನದ ಹರಿವಾಣದಲ್ಲಿ ಆಭರಣಗಳನ್ನೂ, ಉಡುಗೊರೆಯ ವಸ್ತ್ರಗಳನ್ನೂ ಹಿಡಿದಿರುವ ಓಲೆಯಕಾರನು ಪ್ರವೇಶಿಸುವನು.]

**ವಾಜಶ್ರವಸ:**—(ಓಲೆಯಕಾರನನ್ನು ಕುರಿತು) ಇನ್ನು ನೀನು ಹೋಗಬಹುದು. ಹರಿವಾಣವನ್ನು ಇಲ್ಲಿ ತಾ.

**ಓಲೆಯಕಾರ:**—ಮನೆಯ ಬಾಗಿಲಿನವರೆಗೇ ಬಂದಿದ್ದೇನೆ. ಮನೆಗೇ ಬಂದು ಒಪ್ಪಿಸಿ ಹೋಗ್ತೇನೆ. ಸ್ವಾಮಿಯವರಿಗೇಕೆ ಆಯಾಸ?

**ವಾಜಶ್ರವಸ:**—(ಆಲೋಚನಾಮಗ್ನತೆಯಿಂದ ಅನ್ಯಮನಸ್ಕನಾಗಿ) ಆಗಬಹುದು. (ಚಿಂತಿಸುತ್ತ ನಿಲ್ಲುವನು.)

**ಓಲೆಯಕಾರ:**—(ಕೈಮುಗಿದು, ಒಂದೆರಡು ಹೆಜ್ಜೆಗಳು ಹಿಂದಕ್ಕೆ ಹೋಗಿ ವಸ್ತ್ರಾಭರಣಗಳನ್ನೇ ದೃಷ್ಟಿಸಿ ನೋಡಿ ವಾಜಶ್ರವಸನ ಕಡೆಗೆ ನೋಡಿ) ದೇವರೆ! ನನ್ನೂ ರಾಜರಿಗೆ ಪುರೋಹಿತನನ್ನಾಗಿ ಸೃಷ್ಟಿಸಬಾರದಾಗಿತ್ತೆ? ಹರಿವಾಣ ನೋಡಿದರೆ ಭಾಗ್ಯವೇ ಕುಣಿದುಕೊಂಡು ಬಂದಹಾಗಿದೆ. (ನಿಟ್ಟುಸಿರುಬಿಟ್ಟು) ಹುಟ್ಟಿದರೆ ರಾಜರಾಗಿ ಹುಟ್ಟಬೇಕು. ಇಲ್ಲವೇ ರಾಜಪುರೋಹಿತರಾಗಿ ಹುಟ್ಟಬೇಕು.

**ನಚಿಕೇತ:**—ತಂದೆಯೆ? ಈತನು ಆಭರಣಗಳನ್ನೂ ವಸ್ತ್ರಗಳನ್ನೂ, ದೃಷ್ಟಿಸಿ ದೃಷ್ಟಿಸಿ ದುರುಗುಟ್ಟಿ ನೋಡುತ್ತಿದ್ದಾನೆ. ಇವನಿಗೊಂದನ್ನು ಕೊಡಬೇಕೆಂದು ಬೇಡುವೆನು. (ವಾಜಶ್ರವಸನು ಚಿಂತಾಮಗ್ನನಾಗಿ ಗುಣಿತಹಾಕುತ್ತ ನಿಂತಿರುವನು.)

**ನಚಿಕೇತ:**—ತಂದೆಯೆ! ಸುಮ್ಮನಿರುವೆ.........ಅವನಿಗೆ ಕೊಡುವು ದಿಲ್ಲವೆ? (ದೈನ್ಯದಿಂದ) ಒಂದನ್ನಾದರೂ ಕೊಡು.

**ವಾಜಶ್ರವಸ:**—ಹುಡುಗರು ಹುಡುಗರಂತಿರಬೇಕು. ನೀನು ಅರ ಮನೆಯಲ್ಲಿ ಮಾಡಿದ ರಸಾಭಾಸವೇ ಸಾಕು. ಸುಮ್ಮನಿರು.

**ನಚಿಕೇತ:**—ತಂದೆಯೆ! ಅವನಿಗೆ ಬಹಳ ಆಸೆಯೆಂದು ತೋರು ವುದು. ಆಭರಣಗಳನ್ನೇ ದೃಷ್ಟಿಸಿ ನೋಡುತ್ತಿದ್ದಾನೆ.

**ವಾಜಶ್ರವಸ:**—(ರೋಷದಿಂದ) ಅರಮನೆಯಲ್ಲಿ ಮಾಡಿದ ಹಗ ರಣವು ಸಾಲದೆಂದು ಈಗ ತತ್ತ್ವೋಪದೇಶಕ್ಕೂ ಪ್ರಾರಂಭಿ ಸಿದೆಯಾ? (ಕೋಪದಿಂದ ನಚಿಕೇತನನ್ನು **ಹೊಡೆಯುವನು.** ಅವನು ಅಳುತ್ತಾ ನೇಪಥ್ಯಕ್ಕೆ ಹೋಗುವನು. ವಾಜಶ್ರವಸನು ಕೋಪಾವೇಶದಿಂದ ಅವನ ಹಿಂದೆ ಹೋಗುವನು.)

**ಓಲೆಯುಕಾರ**- (ವಾಜಶ್ರವಸನು ಒಂದೆರಡು ಹೆಜ್ಜೆಗಳನ್ನಿಡುವಷ್ಟರಲ್ಲಿ ರಭಸದಿಂದ ಓಡಿಬಂದು) ಸ್ವಾಮಿ, ಸ್ವಾಮಿ.

**ವಾಜಶ್ರವಸ:**—(ಹುಬ್ಬುಗಂಟಿಕ್ಕಿ ಹಿಂದಕ್ಕೆ ಬಂದು ಕ್ರೋಧ ಕಂಪಿತ ಸ್ವರದಿಂದ) ಇದೆಲ್ಲಿಯ ಪ್ರಾರಬ್ಧ? ಎಲವೋ, ಮೊದಲು ಹಿಂದಿರುಗು.

**ಓಲೆಯುಕಾರ:**—ಸ್ವಾಮಿ, ಸ್ವಾಮಿ, ಶಾಂತರಾಗಿ. ನನಗೊಂದು ಅನುಮಾನ.

**ವಾಜಶ್ರವಸ:**—ಏನದು, ನಿನ್ನ ಹಾಳು ಅನುಮಾನ?

**ಓಲೆಯುಕಾರ:**—ಹರಿವಾಣ ಸಮೇತ ಇವುಗಳನ್ನು ಕೊಟ್ಟಿದ್ದಾರೋ ಇಲ್ಲವೋ—ಎಂತ. ಹರಿವಾಣವನ್ನೇಕೆ ಹಿಂದಕ್ಕೆ ತರಲಿಲ್ಲ ವೆಂದರೆ ಏನು ಹೇಳಲಿ? ತಮ್ಮನ್ನು ಕೇಳೋಕೆ ದಿಗಿಲು. ಆದರೂ ಕೇಳಲೇ ಬೇಕಾಯಿತು. ಕೇಳಿಬಿಟ್ಟೆ. ತಪ್ಪಾಗಿದ್ದರೆ ಕ್ಷಮಿಸಬೇಕು, ಜೀಯ.

**ವಾಜಶ್ರವಸ:**—ಹರಿವಾಣವನ್ನು ಹಿಂದಕ್ಕೆ ತೆಗೆದುಕೊಂಡು ಹೋಗುವುದಕ್ಕೂ ಕೇಳಬೇಕೆ? ತೆಗೆದುಕೊಂಡು ಹೊರಡು. ಅದರಲ್ಲಿರುವುದನ್ನು ಮನೆಯಲ್ಲಿ ಕೊಟ್ಟು ಇಲ್ಲಿಂದ ಹೊರಡು. (ಮತ್ತೆ ಚಿಂತಿಸುತ್ತ ನಿಲ್ಲುವನು.)

**ಓಲೆಯುಕಾರ:**—ಅಪ್ಪಣೆ. (ಮನೆಯೊಳಕ್ಕೆ ಹೋಗಿ ಹರಿವಾಣದೊಡನೆ ಹಿಂತಿರುಗಿ ಬಂದು) ಅರಮನೆಗೆ ಹೋಗಲು ಅಪ್ಪಣೆಯಾಗ ಬೇಕು.

**ವಾಜಶ್ರವಸ:**—ಹೊರಡು. (ಓಲೆಯುಕಾರನು ಹೋದ ಕಡೆಗೇ ದೃಷ್ಟಿ ಸುತ್ತಿದ್ದು, ಕೊನೆಗೆ ಒಂದೆರಡುಸಲ ಸುತ್ತಮುತ್ತಲೂ ನೋಡಿ, ಶಾಂತಿಯಿಂದ ಕೂಡಿದ ಮುಖಮುದ್ರೆಯಿಂದ) ರಾಜನು ನಚಿ ಕೇತನ ಅಪರಾಧವನ್ನು ಮನ್ನಿಸಿರಬೇಕು, ಮನ್ನಿಸಿರಬೇಕು. ಇಲ್ಲವಾದರೆ ಈ ಸಂಭಾವನೆಯು ದೊರೆಯುತ್ತಿರಲಿಲ್ಲ. ಅದು ಹಾಗಿರಲಿ. ಜಗತ್ತೇ ಸ್ಥಾನಮಾನಗಳ ಸೂತ್ರದ ಬೊಂಬೆ. ಎಲ್ಲಿ ಅಧಿಕಾರವೋ, ಎಲ್ಲಿ ಐಶ್ವರ್ಯವೋ, ಎಲ್ಲಿ ದರ್ಪವೈಭವ ಗಳೋ, ಅಲ್ಲಿಯೇ ಘನತೆ ಗೌರವಗಳ ನೆಲೆಮನೆ. ನಾನು ರಾಜಪುರೋಹಿತನಾಗದೆ ಹೋಗಿದ್ದರೆ ನಚಿಕೇತನ ಉಪನಯ ನವು ಇಷ್ಟು ವೈಭವದಿಂದ ನಡೆಯುತ್ತಿದ್ದಿತೆ? ರಾಜನಿಂದ ಈಗಿನ ಸನ್ಮಾನವೂ, ಈ ಬಗೆಯ ಸಂಭಾವನೆಯೂ ದೊರೆಯು ತ್ತಿದ್ದುವೆ? ಸಂಪತ್ತನ್ನು ದೂಷಿಸುವವರ ಹೃದಯ ದೌರ್ಬ ಲ್ಯಕ್ಕೆ ಅಭಾವ ವೈರಾಗ್ಯವೇ ಕಾರಣವೆಂದು ತೋರುವುದು. ವಿಶ್ವಜಿದ್ಯಜ್ಞಕ್ಕೆ ಇದೆಲ್ಲವೂ ಮಿಸಲು.

**ನಂದಿನೀದೇವಿ:**—(ಪ್ರವೇಶಿಸಿ) ರಾಜನು ಮತ್ತೆ ವಸ್ತ್ರಾಭರಣಗಳ ಮೆಚ್ಚನ್ನು ಕೊಟ್ಟಿದ್ದಾನೆ.

**ವಾಜಶ್ರವಸ:**—(ಸಂತೋಷದಿಂದ) ಯೋಗ್ಯತೆಯೂ ಪದವಿಯೂ ಒಟ್ಟುಗೂಡಿದರೆ ಮೆಚ್ಚಿನಮೇಲೆ ಮೆಚ್ಚು. ಬಹುಮಾನದ ಮೇಲೆ ಬಹುಮಾನ.

**ನಂದಿನೀದೇವಿ:**—ತಮಗೆ ಜ್ಞಾಪಕವಿರಬಹುದು : ಮುತ್ತುಗಳನ್ನು ಪೋಣಿಸಿದಂತಿದ್ದ ಅಕ್ಷರಗಳಲ್ಲಿ ಬರೆದಿದ್ದ ಸಂಹಿತೆಯ ಓಲೆಗರಿ ಪುಸ್ತಕವೊಂದನ್ನು ವಾನಪ್ರಸ್ಥಾಶ್ರಮಿಗಳೊಬ್ಬರು ಕಳುಹಿಸಿದ್ದರು. ಆಗ ಅದನ್ನು ನೋಡಿ, ಪೂಜ್ಯಪಾದರಾದ ಮಾವನವರು ಹೀಗೆಯೇ ಹಿಗ್ಗಿದ್ದರು. ತಮ್ಮ ಸಂತೋಷವನ್ನು ನೋಡಿದರೆ, ಅದನ್ನು ಕೈಯಲ್ಲಿ ಹಿಡಿದಾಗಿನ ಅವರ ಸಂತೋಷವು ನೆನಪಿಗೆ ಬರುತ್ತದೆ.

**ವಾಜಶ್ರವಸ:**--(ಸ್ವಲ್ಪ ಅಸಮಾಧಾನದಿಂದ) ನಾನೂ ಕಾವ್ಯವ್ಯಾಸಂಗ ಮಾಡಿದ್ದೇನೆ. ನಿನ್ನ ಮಾತುಗಳ ಧ್ವನಿಯು ನನಗೂ ಅರ್ಥವಾಗುತ್ತದೆ. ನೀನು ಕವಯಿತ್ರಿಯಾಗಬೇಕಾಗಿದ್ದಿತು. ಈ ಕುಹಕಬುದ್ಧಿಯನ್ನು ಬಿಟ್ಟು, ವಸ್ತ್ರಾಭರಣಗಳನ್ನು ನೋಡಿ, ಆನಂದಿಸು. ವಿಶ್ವಜಿದ್ಯಜ್ಞವು ಅಟ್ಟಹಾಸದಿಂದ ನಡೆಯಲೇಬೇಕು. ಹಾಗೆ ನಡೆಯಲು ಇವೆಲ್ಲ ಬೇಕೇ ಬೇಕು.

**ನಂದಿನೀದೇವಿ:**—ಮನೆಯೊಳಕ್ಕೆ ಹೋಗೋಣ. ನಚಿಕೇತನು ಅಳುತ್ತಿದ್ದಾನೆ. ಅಲ್ಲದೆ, ಇಲ್ಲಿನಿಂತು ಹೆಚ್ಚುಮಾತು ತಾನೆ ಏಕೆ ?

**ವಾಜಶ್ರವಸ:**—ಹೆಚ್ಚುಮಾತನಾಡಕೂಡದೆಂದು ನನಗೆ ಹೇಳುವ ಈ ಮಾತನ್ನು ನಿನ್ನಮಗನಿಗೆ ಹೇಳಿ ಬುದ್ಧಿಕಲಿಸಬಾರದೆ! ಅದರಿಂದಲಾದರೂ ಅವನ ಅಪರಾಧಗಳು ಕಡಿಮೆಯಾಗಲು ಅವಕಾಶವನ್ನು ಕಲ್ಪಿಸಬಾರದೆ!

**ನಂದಿನೀದೇವಿ:**—(ಬೆಚ್ಚಿ) ಮಗುವು ಯಾವ ಅಪರಾಧಮಾಡಿತು ?

**ವಾಜಶ್ರವಸ:**—ಈ ಮುದ್ದಿನಿಂದಲೇ, ಈ ಲಾಲನೆಯಿಂದಲೇ, ಬಾಲಕರು ಕೆಟ್ಟುಹೋಗುವುದು. ನಿನ್ನ ಮಗುವು ಈ ದಿನ ನನಗೇ ತತ್ತ್ವೋಪದೇಶಮಾಡಲುಪಕ್ರಮಿಸಿತು. ಅದಕ್ಕಾಗಿ ಅವನನು ದಂಡಿಸಲೇ ಬೇಕಾಯಿತು. ಅಲ್ಲಿ ಅರಮನೆ

ಯಲ್ಲಿಯೂ ತಲೆಹರಟೆ. ಮಹಾರಾಜನ ಔದಾರ್ಯವು ಎಷ್ಟು ಅಧಿಕವಾದುದೋ ಅವನ ಮನಸ್ಸೂ ಅಷ್ಟು ಮೃದು. ಇಲ್ಲವಾದರೆ, ನಚಿಕೇತನ ಗತಿಯು ಏನಾಗುತ್ತಿದ್ದಿತೋ ಹೇಳಲಳವಲ್ಲ.

**ನಂದಿನೀದೇವಿ:**—ನಚಿಕೇತನು ಇನ್ನೂ ಹಾಲುಹಸುಳೆ. ನನ್ನ ಮಗುವು ನಾಳೆಯೇ ವಾಮದೇವರ ಗುರುಕುಲಕ್ಕೆ ಹೊರಟು ಹೋಗುತ್ತದೆ. ನಾಳೆ ಪ್ರಯಾಣಮಾಡುವ ಮಗುವನ್ನು.... ........ಹೋಗಲಿ........ಆ ಮಾತು ಬೇಡ. ರಾಜನಬಳಿಯಲ್ಲಿ ನಚಿಕೇತನು ಅಪರಾಧಮಾಡಿದುದೇನು? ಅಪರಾಧವಾಗಿದ್ದರೆ ಅವಶ್ಯವಾಗಿ—ಆದರೆ ಅವನ ಎಳೆಯ ವಯಸ್ಸಿಗೆ ತಕ್ಕಂತೆ—ದಂಡಿಸಬಹುದು.

**ವಾಜಶ್ರವಸ:**—ಮಹಾರಾಜಸ್ತುತಿಯ ಸೊಗಸಾದ ಕವನವನ್ನು ನೂತನವಟುವಾದ ನಚಿಕೇತನು ತನ್ನ ಉಪನಯನವಾದ ಸಂತೋಷಕ್ಕಾಗಿ ಸಭೆಯಲ್ಲಿ ಹೇಳಬೇಕೆಂದು ಗೊತ್ತಾಗಿದ್ದುದು ನಿನಗೆ ತಿಳಿದೇ ಇದೆ. ನಾನು ಪಟ್ಟ ಕಷ್ಟವೆಲ್ಲಾ ವ್ಯರ್ಥವಾಯಿತು. ನಚಿಕೇತನು ಒಂದು ಪಾದವನ್ನೂ ಪೂರ್ತಿಯಾಗಿ ಹೇಳಲಿಲ್ಲ. ನರಸ್ತುತಿಯನ್ನು ಹೇಳುವುದಿಲ್ಲವೆಂದ. ನಿನ್ನ ಹೆಸರನ್ನೂ ಹೇಳಿ ಹಗರಣಮಾಡಿದ. ಆದರೂ ಮಹಾರಾಜನು ನನ್ನ ದಾಕ್ಷಿಣ್ಯದಿಂದ ಬದ್ಧನಾಗಿ ಅಶ್ರುತಪೂರ್ವವಾದ ಉದಾರಭಾವದಿಂದ ಬಹುಮಾನಮಾಡಿ ಈ ಮೆಚ್ಚುಗಳನ್ನು ಕೊಟ್ಟಿದ್ದಾನೆ. ಆದಕಾರಣ, ಇವು ಅಮೂಲ್ಯವಾದವು.

**ನಂದಿನೀದೇವಿ:**—ನಚಿಕೇತನು ನನ್ನ ಹೆಸರನ್ನೇಕೆ ಹೇಳಿದ?

**ವಾಜಶ್ರವಸ:**—ಅಯ್ಯೋ! ಆ ಹಗರಣವನ್ನು ಎಷ್ಟೆಂದು ಹೇಳಲಿ? ಅವನು ಆಡಿದ ಮಾತುಗಳಿವು: "ಮನ್ನಿಸು ಮಹಾರಾಜ.

ನಮ್ಮ ತಾತಂದಿರು ನರಸ್ತುತಿಮಾಡುವುದಿಲ್ಲವೆಂಬ ದೀಕ್ಷೆಯನ್ನು ತಳೆದಿದ್ದರೆಂದೂ, ಮನುಷ್ಯರು ಮನುಷ್ಯರನ್ನು ಅನವಶ್ಯವಾಗಿ ಸ್ತೋತ್ರಮಾಡಕೂಡದೆಂದೂ ನಮ್ಮ ತಾಯಿ ಅನೇಕರೊಡನೆ ಹೇಳುತ್ತಲೇ ಇರುತ್ತಾರೆ. ನಾನೂ ಮನುಷ್ಯ ನೀನೂ ಮನುಷ್ಯ. ನಾನು ನಿನ್ನ ಸ್ತೋತ್ರಪಾಠವನ್ನು ಹೇಳಲಾರೆ.''—ಹೀಗೆಂದುಬಿಟ್ಟ. ನನ್ನ ಮನಸ್ಸು ಕ್ರೋಧ ಸಂತಾಪಗಳಿಂದ ಪಾತಾಳಕ್ಕಿಳಿದುಹೋಯಿತು.

**ನಂದಿನೀದೇವಿ:**—(ಆನಂದದಿಂದ) ಇದನ್ನು ಕೇಳಿ ನನ್ನ ಮನಸ್ಸು ಹೆಮ್ಮೆ ಸಂತೋಷಗಳಿಂದ ಸ್ವರ್ಗಲೋಕಕ್ಕೆ ಏರಿಹೋಗಿದೆ. ನನ್ನ ಮುದ್ದು ನಚಿಕೇತ ಇಂತಹ ಮಾತುಗಳನ್ನಾಡಿದನೆ? ನಿಮ್ಮ ತಂದೆ ಉದ್ದಾಲಕ ಮಹರ್ಷಿಗಳು ಪೂಜ್ಯಪಾದರು. ಅವರ ಆಶೀರ್ವಾದ ಮಹಿಮೆ. ಅವರ ತಪಸ್ಸಿನ ಸಿದ್ಧಿ. ಅವರ ಅನುಗ್ರಹದ ಪ್ರಭಾವ.

**ವಾಜಶ್ರವಸ:**—(ನಿರುತ್ಸಾಹದಿಂದ) ಲಕ್ಷಣವಾಯಿತು........ಈಗ ಸರಿಹೋಯಿತು. ಹುಚ್ಚಿಯಂತೆ ಅರ್ಭಟಿಸಬೇಡ. ಯಾರಾದರೂ ಕೇಳಿಯಾರು, ನಿನ್ನ ಅರ್ಥವಿಲ್ಲದ ಈ ಪೊಳ್ಳು ಕೂಗನ್ನು.

**ನಂದಿನೀದೇವಿ:**—(ಸಂತೋಷಪಾರವಶ್ಯದಿಂದ) ಬೀದಿಯು ದೂರವಾಗಿದೆ. ನಮ್ಮ ಮನೆಯ ಮುಂದಣ ಬಯಲಿನಲ್ಲಿ ನಾವಿದ್ದೇವೆ. ಈ ಮಟಮಟ ಮಧ್ಯಾಹ್ನದಲ್ಲಿ ಇಲ್ಲಿಗೆ ಬರುವರಾರು? ಬಂದರೆ ತಾನೆ ಭಯವೇನು? ಅಯ್ಯೋ! ಸಂತೋಷದೊಡನೆ ನನಗೆ ಸಂಕಟವೂ ಆಗುವುದು. ರಾಜ ಪೌರೋಹಿತ್ಯದ ಐಹಿಕ ಭೋಗದಮೇಲೆ ನಿಮಗಿರುವ ಇಚ್ಛೆಯೇ ಶ್ರೇಯಸ್ಸಿನ ಮಾರ್ಗವಾದ ಪಾರಮಾರ್ಥಿಕತೆಯಲ್ಲಿರಬಾರದಾಗಿದ್ದಿತೆ! ಆ ಭಾಗ್ಯವು ನನಗೆಲ್ಲಿ? ನನ್ನ ನಚಿಕೇತನಾದರೂ ನನ್ನ ನೋವಿನ ಕಣ್ಣಿಗೆ ಲೋಕಮಾತೆಯ ಸ್ತನ್ಯಧಾರೆಯಂತಾಗಬಾರದೆ!

**ನಚಿಕೇತ**:—(ಪ್ರವೇಶಿಸಿ) ಮನೆಯೊಳಕ್ಕೆ ಬರಲೇ ಇಲ್ಲವಲ್ಲಮ್ಮ. ನೀನೂ ನನ್ನ ಮೇಲೆ ಕೋಪಿಸುವಿಯೇನಮ್ಮ? ನೀವಿಬ್ಬರೂ ನನ್ನನ್ನು ಮನ್ನಿಸಬೇಕಮ್ಮ.

**ನಂದಿನೀದೇವಿ**:—(ಆನಂದ ಪರವಶಳಾಗಿ ಮುಂದೆ ನುಗ್ಗಿ ಅವನನ್ನು ಬಿಗಿದಪ್ಪಿ, ಎತ್ತಿಕೊಂಡು) ನನ್ನ ಮುತ್ತೆ, ನನ್ನ ಮಾಣಿಕ್ಯವೆ. ರಾಜಸಭೆಯಲ್ಲಿ ಎಂತಹ ಮಾತನಾಡಿದೆ! ಎಂತಹ ಮಾತ ನಾಡಿದೆ! ನಮ್ಮ ಮನೆಯ ಬೆಳಕು. ನಮ್ಮ ವಂಶದ ಬೆಳಕು. ಜಗತ್ತಿಗೇ ಬೆಳಕಾಗು, ನನ್ನ ದೊರೆಯೆ.

**ಸುಕನ್ಯೆ**:—(ಪ್ರವೇಶಿಸಿ, ನಂದಿನೀದೇವಿಯ ಬಳಿಗೆ ಓಡಿಬಂದು) ನನ್ನ, ನನ್ನ, ನನ್ನನ್ನೂ, ಎತ್ತಿಕೊಳ್ಳಮ್ಮ. ಅಣ್ಣನ್ನ ಇಳಿಸಮ್ಮ.

**ನಂದಿನೀದೇವಿ**:—ಬಾ, ಚಿನ್ನ, ನೀನೂ ಬಾ.

(ಸುಕನ್ಯೆಯನ್ನು ಎತ್ತಿಕೊಂಡು ಹೋಗುವಳು)

**ವಾಜಶ್ರವಸ**:—(ಅವರು ಹೋದಕಡೆಗೇ ನೋಡುತ್ತ ಆಲೋಚಿಸು ತ್ತಿದ್ದು) ಇವಳೇ ಹುಚ್ಚಳೋ! ಅಥವಾ ನಾನೇ ಹುಚ್ಚನೋ ತಿಳಿಯದು. (ಹುಬ್ಬುಗಳನ್ನು ಕೂಡಿಸಿ, ದೀರ್ಘಾಲೋಚನೆಮಾಡಿ) ಧರ್ಮವಿರುದ್ಧವಲ್ಲದ ಭೋಗವೆಂದಿಗೂ ನಿಷಿದ್ಧವಲ್ಲ. ಅಲ್ಲದೆ ಯಜ್ಞಕ್ಕಾಗಿ ನಾನು ಧನಾರ್ಜನೆ ಮಾಡುತ್ತಿದ್ದೇನೆ. ಮತ್ತೆ ಆಶ್ರಮಕ್ಕೆ ಹಿಂತಿರುಗುವ ಯೋಚನೆಯೂ ಇದೆ. ಆದರೂ ನಂದಿನಿಯೇಕೆ ಪದೇಪದೇ ನೊಂದುಕೊಳ್ಳುವಳು? ಇರಲಿ... ಮಧ್ಯಾಹ್ನಿಕ ಕರ್ಮಗಳಿಗೆ ಕಾಲಾತೀತವಾದೀತು.

(ಹೋಗುವನು.)

---

# ಎರಡನೆಯ ಅಂಕ

## ದೃಶ್ಯ ೧

[ವಾಮದೇವ ಮಹರ್ಷಿಗಳ ಆಶ್ರಮಕ್ಕೆ ಸ್ವಲ್ಪ ದೂರದಲ್ಲಿ ಕಾಡಿನ ಮಧ್ಯದ ಒಂದು ಮಾರ್ಗ. ವಾಮದೇವ ಮಹರ್ಷಿಗಳು ಇಬ್ಬರು ಶಿಷ್ಯರೊಡನೆ ಪ್ರವೇಶಿಸುವರು.]

**ವಾಮದೇವ:**—ವತ್ಸ! ಸೋಮರಾತ! ಬಾಲಕನಾದ ನಚಿಕೇತನನ್ನೂ, ಅವನ ಸಂಗಡಿಗರನ್ನೂ, ತೀರ್ಥೋದಕವನ್ನು ತರಲು ಈ ದೂರ ಪ್ರಯಾಣಕ್ಕೆ ಕಳುಹಿಸಿದುದು ಅನುಚಿತವಾಯಿತು. ಪಾಪ! ಅವರು ಚಿಕ್ಕ ಹುಡುಗರು. ನೀವೇ ದೊಡ್ಡವರು ಯಾರಾದರೂ ಹೋಗಿದ್ದರೆ ನನ್ನ ಮನಸ್ಸಿಗೆ ಹೀಗೆ ಚಿಂತೆಯಾಗುತ್ತಿರಲಿಲ್ಲ.

**ಸೋಮರಾತ:**—ಪೂಜ್ಯರೆ! ಅವರ ಉತ್ಸಾಹವನ್ನು ನೋಡಿ ನಾವೂ ಮುಗ್ಧರಾದೆವು. ಪುಟಚೆಂಡಿನಂತೆ ಹಾರಿ ನಿಂತ ನಚಿಕೇತನ ನಗುಮುಖವು ನಮ್ಮೆಲ್ಲರನ್ನೂ ಮೂಕರಂತೆ ಪರಿಣಾಮ ಗೊಳಿಸಿತು.

**ವಾಮದೇವ:**—ಪ್ರಭೋ! ಪರಮೇಶ್ವರ! ಹಿರಣ್ಯಗರ್ಭ! ನನ್ನ ಪ್ರಿಯ ಶಿಷ್ಯರನ್ನು ಸುರಕ್ಷಿತವಾಗಿ ಆಶ್ರಮಕ್ಕೆ ಹಿಂದಿರುಗಿಸು. ಅವರು ಬರುವುದನ್ನು ನಿರೀಕ್ಷಿಸುತ್ತಿರುವ ನನಗೆ ಒಂದೊಂದು ಕ್ಷಣವೂ ಒಂದೊಂದು ಯುಗವಾಗಿದೆ. (ನೇಪಥ್ಯದ ಕಡೆಗೆ ನೋಡಿ ಸಂತೋಷದಿಂದ) ಅದೋ, ಅದೋ, ಬಾಲಕರು ಬಂದರು. ನೀವು ಹೊರಡಿ. ಅವರು ಬಂದರೆಂದು ಆಶ್ರಮದಲ್ಲಿ ತಿಳಿಸಿ. ಮಾರ್ಗಾಯಾಸದಿಂದ ಬಳಲಿರುವ ಹಸುಳೆಗಳ ಉಪಚಾರಕ್ಕೆ ಅಣಿಮಾಡಿ. (ಶಿಷ್ಯರಿಬ್ಬರೂ ಹೋಗುವರು) ನಚಿಕೇತನು ಎಂತಹ ತೇಜಸ್ವಿ! ಇಂತಹ ಸಚ್ಛಿಷ್ಯನಿಗೆ ಪಾಠ

ಹೇಳಲು ಪ್ರಾರಂಭಿಸಿದ ಆರು ವರುಷಗಳೂ ಆರು ಕ್ಷಣಗಳಂತೆ ಕಳೆದುಹೋದುವು. ಇವನ ತಂದೆಯು ಮಾತ್ರ ರಾಜಪುರೋಹಿತನಾಗದೆ ಆಶ್ರಮವಾಸಿಯಾದ ಋಷಿಯಾಗಿಯೇ ಇದ್ದು, ವಂಶದ ಕೀರ್ತಿಯನ್ನುಳಿಸಿದ್ದರೆ! ಅದೋ! ಬಾಲಕರು! ಮಾರ್ಗವನ್ನು ಬಿಟ್ಟು ದೂರದಲ್ಲಿ ಮರೆಯಾಗಿ ನಿಂತು, ಅವರ ಲೀಲೆಯನ್ನು ನೋಡಿ, ಅವರ ಮಾತುಗಳನ್ನು ಕೇಳಿ ಆನಂದಿಸುವೆನು. ಬಾಲ್ಯವೆ! ಬಾಲ್ಯವೆ! ದೇವಮಾತೆಯಾದ ಪೃಥ್ವೀದೇವಿಯ ಮಂಜುಳವಾದ ಮಂದಸ್ಮಿತವೇ ಭೂಲೋಕದಲ್ಲಿ ಬಾಲ್ಯವೆಂಬ ಮುದ್ದಿನ ಹೆಸರನ್ನು ಪಡೆದಿರಬೇಕು. ಬಾಲಕರ ಚಪಲಗತಿಯು ಎಷ್ಟು ಮನೋಹರವಾಗಿದೆ! ಸಮೀಪಕ್ಕೆ ಬಂದರು. ಪಾಪ! ಪಾಪ! ಬಹಳ ಬಳಲಿರುವರೋ ಏನೋ! (ದೂರವಾಗಿ ಹಿಂಭಾಗಕ್ಕೆ ನಿಲ್ಲುವರು.)

[ಹದಿನಾಲ್ಕು ವರುಷ ವಯಸ್ಸಿನ ನಚಿಕೇತನು ತೀರ್ಥ ಕಲಶವನ್ನು ತಲೆಯ ಮೇಲೆ ಹೊತ್ತು, ಪ್ರವೇಶಿಸುವನು. ಅವನೊಡನೆ ಮೂರುಮಂದಿ ವಟುಗಳು ಬರುವರು. ಅವರೆಲ್ಲರೂ ಮಾರ್ಗಾಯಾಸದಿಂದ ಸ್ವಲ್ಪ ಬಳಲಿ, ಕಾಲುಗಳನ್ನು ಎಳೆದೆಳೆದು ಹಾಕುತ್ತ ಬರುವರು. ಒಬ್ಬನ ಕೈಯಲ್ಲಿ ಬೇಲದ ಹಣ್ಣುಗಳು. ಒಬ್ಬನ ಕೈಯಲ್ಲಿ ಸಮಿತ್ತುಗಳು. ಮತ್ತೊಬ್ಬನ ಕೈಯಲ್ಲಿ ಒಣಗಿದ ಸೌದೆಯ ಪುಟ್ಟಿಕಂತೆ. ನಚಿಕೇತನು ಗಾಂಭೀರ್ಯದ ನೆಲೆಯಂತೆ ನಿಂತು "ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ" ಎಂದು ವೇದಗಾನ ಮಾಡುತ್ತಿರುವಲ್ಲಿ ಉಳಿದವರು ತಾವು ತಾವು ತಂದಿರುವ ಸಾಮಾನುಗಳೇ ಹೆಚ್ಚೆಂದು ಪರುಷವಣೆಯಿಂದ ಬೀಸುವ ಭಾವವೈಖರಿಯಿಂದ ಪರಸ್ಪರವಾಗಿ ಅವುಗಳನ್ನು ತೋರಿಸಿ ಪ್ರದರ್ಶಿಸುತ್ತ ಸಂತೋಷಿಸುತ್ತಲೂ, ನಚಿಕೇತನ ವೇದಗಾನವನ್ನು ಕೇಳಿ ಆನಂದಿಸುತ್ತಲೂ ನಿಲ್ಲುವರು.]

**ಮೊದಲನೆಯ ವಟು:**—(ನಚಿಕೇತನ ವೇದಗಾನವು ಮುಗಿದ ಮೇಲೆ) ಈ ನಚಿಕೇತ ನಮಗಿಂತ ಚಿಕ್ಕವನು. ಆದರೂ ತೀರ್ಥೋ

ದಕದ ಕಲಶವನ್ನು ತಾನೇ ಹೊತ್ತು ತಂದಿದ್ದಾನೆ. ಎಷ್ಟು ಕೇಳಿದರೂ ಕೊಡಲಿಲ್ಲ. ಎಲ್ಲರೂ ಸ್ವಲ್ಪ ಸ್ವಲ್ಪ ದೂರ ತಂದಿದ್ದರೆ!

**ನಚಿಕೇತ:**—ಗುರುಸೇವೆಯಿಂದ ಧನ್ಯನಾಗಲು ಹಾಗೆಮಾಡಿದೆ.

**ಎರಡನೆಯ ವಟು:**—ನಮಗೆ ಗುರುಭಕ್ತಿಯಿಲ್ಲವೋ, ಹಾಗಾದರೆ!

**ನಚಿಕೇತ:**—ಭದ್ರಮುಖ! ನಿನ್ನ ಮಾತುಗಳು ನಮ್ಮ ಗುರುಗಳ ಶಿಷ್ಯನ ಯೋಗ್ಯತೆಗೆ ತಕ್ಕವುಗಳಲ್ಲ. ಗುರುಭಕ್ತಿಯಲ್ಲಿ ನಾವೆಲ್ಲರೂ ಒಂದೇ. ಹೀಗಿರುವಲ್ಲಿ ನಾನು ನಿಮ್ಮಲ್ಲಿ ಭೇದವೆಣಿಸುವೆನೆ? ಅಂತಹ ಪಾಪವೇ ನನಗೆ ಬೇಡ.

**ಮೂರನೆಯ ವಟು:**—ನಮಗೆಲ್ಲಾ ದಣಿವಾದರೂ ಈ ನಚಿಕೇತನಿಗೆ ಬೇರೆ ದಣಿವಾಗಿಲ್ಲ. ಇವನ ಮೈ ಒಳ್ಳೆಯ ಹೊಂಗೆಯ ಕೊನೆಯ ಹಾಗೆ ನಾರುವ್ಯೆ.

**ನಚಿಕೇತ:**—ಈ ಪ್ರದೇಶವನ್ನು ನೋಡಿ. ವನದೇವಿಯೇ ಪ್ರಸನ್ನಳಾಗಿ ಲಾಸ್ಯವಾಡುವಂತಿದೆ. ಜಗನ್ನಿಯಾಮಕನ ಸಿರಿವೀಡಿನ ಸಂಪದ್ವಿಶೇಷವೋ—ಎಂಬಂತೆ ತರುಗುಲ್ಮಲತಾರಾಜಿಗಳು ಕಂಗೊಳಿಸುತ್ತಿವೆ. ಹಿರಿಯರಾದ ಬಂಧುಗಳ ಹಾಗೆ ವೃಕ್ಷಗಳು ವಾತ್ಸಲ್ಯದಿಂದ ನಮ್ಮನ್ನು ಬರಮಾಡಿಕೊಳ್ಳುವಂತೆ ತೋರುತ್ತಿದೆ. ತೀರ್ಥೋದಕ ಕಲಶವನ್ನು ತಂದು ಪವಿತ್ರರಾಗಿದ್ದೇವೆ. ದೇವಮಾತೆಯಾದ ಪೃಥ್ವೀಮಾತೆಯನ್ನು ಸ್ತುತಿಸೋಣ, ಬನ್ನಿ.

**ಭದ್ರಮುಖ:**—ಸಾಕಪ್ಪಾ, ಸಾಕು. ನಿನ್ನ ಭಕ್ತಿಗೆ ಸಮಯವೇ, ಅಲ್ಲವೇ, ಎಂಬ ಯೋಚನೆಯೇ ನಿನಗಿಲ್ಲ. ನಡೆದು ನಡೆದು ಕಾಲುಗಳು ನೋಯುತ್ತಿವೆ.

**ಮೂರನೆಯ ವಟು:**—ಈಗ ಬೇಡ ನಚಿಕೇತ. ಇನ್ನೊಂದುದಿನ ತುಂಬ ಸ್ತೋತ್ರಮಾಡೋಣ. ನಾವು ಹೋಗುವೆವು. (ವಟುಗಳು ಮೂವರೂ ಹೋಗುವರು)

**ನಚಿಕೇತ:**—ಆರ್ಯಜನನಿ! ಪೃಥ್ವೀಮಾತೆ? ವಸಂತಲಕ್ಷ್ಮಿಯೇ ಪ್ರಸನ್ನಳಾಗಿರುವಂತೆ ತೋರುವ ಇಂತಹ ಸ್ಥಳದಲ್ಲಿ ನಿಂತು ನಿನ್ನನ್ನು ಸ್ತೋತ್ರಮಾಡುವ ಬುದ್ಧಿಯು ಹುಟ್ಟಿದುದು ಯಾವಜನ್ಮದ ಪುಣ್ಯವಿಶೇಷವೋ! ನನ್ನ ಮನಸ್ಸು ನಿರಂತರವೂ ಪಾಪವಿಮುಖವಾಗಿರುವಂತೆ ಕರುಣಿಸು. ನಿನ್ನನ್ನು ಎಷ್ಟೆಂದು ಕೊಂಡಾಡಲಿ!

**ವಾಮದೇವ:**—(ಶಿಷ್ಯಪ್ರಿಯತೆಯ ಪರಮಾನಂದದಿಂದ ಓಡಿಬಂದು ಅವನನ್ನು ಬಿಗಿದಪ್ಪಿ) ನೀನು ಮನುಷ್ಯಲೋಕದ ಆಣಿಮುತ್ತು; ಆಣಿಮುತ್ತು.

**ನಚಿಕೇತ:**—(ಆಶ್ಚರ್ಯ ಸಂತೋಷಗಳಿಂದ) ಪೂಜ್ಯರು, ಪೂಜ್ಯರು! (ನಮಸ್ಕರಿಸಿ) ಪೂಜ್ಯರೆ, ವಂದಿಸುವೆನು. ಯಾರ ಕೀರ್ತಿಯು ದಿಕ್ಕು ವಿದಿಕ್ಕುಗಳಲ್ಲಿಯೂ ಜೇವಡೆದು ಪ್ರತಿಧ್ವನಿತವಾಗುತ್ತಿದೆಯೋ, ಆ ಪರಮಗುರುಗಳಾದ ತಮ್ಮ ಶಿಷ್ಯನೆನಿಸಿರುವುದೇ ನನ್ನ ಜೀವನದ ಸಕಲಸೌಭಾಗ್ಯ. ಪೂಜ್ಯರೆ! ನನ್ನ ಪಿತಾಮಹರಾದ ಉದ್ದಾಲಕಮಹರ್ಷಿಗಳೂ, ನನ್ನ ಮಾತಾಮಹರೂ ಸ್ವರ್ಗ್ಯವಾದ ಅಗ್ನಿವಿದ್ಯೆಯನ್ನು ಸಾಧಿಸಬೇಕೆಂದಿದ್ದರಂತೆ. ನಾನಾದರೂ ಅದನ್ನು ಸಾಧಿಸಬೇಕೆಂದು ನಮ್ಮತಾಯಿ ಹೇಳುತ್ತಿರುತ್ತಾರೆ. ಅದನ್ನು ಸಾಧಿಸಲು ನನಗೆ ತೀವ್ರಾಭಿಲಾಷೆ.

**ವಾಮದೇವ:**—(ಸ್ವಗತ) ಭಗವತಿ, ಸರಸ್ವತಿ! ಈ ಬಾಲಕನಿಗೆ ಏನೆಂದು ಉತ್ತರಹೇಳಲಿ? ನೀನು ನನಗೆ ಒಲಿದಂದು, ಅಗ್ನಿವಿದ್ಯೆಯನ್ನು ನಿನ್ನಿಂದ ಉಪದೇಶಹೊಂದಿ ಇವನಿಗೆ ತಿಳಿಸ

ಬೇಕು. (ಪ್ರಕಾಶ) ವತ್ಸ! ಈ ಚಿಕ್ಕವಯಸ್ಸಿಗೇ ನಿನಗೆ ಫಲಿಸಿರುವ ಈ ಪ್ರತಿಭೆಯೂ ಸಂಸ್ಕಾರವೂ ನಿನ್ನ ಪೂರ್ವಜರ ಪುಣ್ಯ ಪರಿಪಾಕ. (ಆನಂದಬಾಷ್ಪವನ್ನು ಸುರಿಸುತ್ತ ಗದ್ಗದ ಧ್ವನಿಯಿಂದ ಸ್ವಗತ) ದೇವ ದೇವ! ನನ್ನ ಮುದ್ದು ನಚಿಕೇತ ನಿಂದ ಮನುಷ್ಯಲೋಕವೇ ಉದ್ಧಾರವಾಗಿ, ಜ್ಞಾನ ಜ್ಯೋತಿಯು ಮತ್ತಷ್ಟು ಉಜ್ಜ್ವಲವಾಗುವಂತೆ ಅನುಗ್ರಹಿಸು.

**ನಚಿಕೇತ:**—(ಸ್ವಗತ) ಪೂಜ್ಯರು ಅಗ್ನಿವಿದ್ಯೆಯ ವಿಷಯವನ್ನೇ ಪ್ರಸ್ತಾವಿಸಲಿಲ್ಲ. ಅದಕ್ಕೆ ನಾನಿನ್ನೂ ಅನಧಿಕಾರಿಯೆಂಬುದು ವ್ಯಕ್ತವಾಯಿತು. ನಾನು ಕೇಳಿದುದು ಅಪರಾಧವೇ ಸರಿ. (ನಾರದಮಹರ್ಷಿಗಳು ಗಾನಮಾಡುತ್ತ ಪ್ರವೇಶಿಸುವರು. ವಾಮ ದೇವರೂ, ನಚಿಕೇತನೂ, ನಮಸ್ಕರಿಸುವರು.)

**ನಾರದ:**—ತಪಸ್ಸೂ, ಶ್ರೇಯಸ್ಸೂ, ವರ್ಧಿಸಲಿ.

**ನಚಿಕೇತ:**—(ನಾರದರಿಗೆ ಕೇಳಿಸದಂತೆ ಮಾತನಾಡಲು ಪ್ರಯತ್ನಿಸಿ) ಪೂಜ್ಯರೆ! ಇವರಾರು?

**ವಾಮದೇವ:**—ಇವರು ಜ್ಞಾನಾನಂದಮಯರಾದ ನಾರದಮಹರ್ಷಿ ಗಳು, ಇವರಿಗೆ ನಮಸ್ಕರಿಸು.

**ನಚಿಕೇತ:**—(ನಾರದರನ್ನುದ್ದೇಶಿಸಿ) ಪೂಜ್ಯರೆ! ತಮ್ಮ ಪದತಲದಲ್ಲಿ ಮತ್ತೊಮ್ಮೆ ನಮಸ್ಕರಿಸಿ ಪವಿತ್ರನಾಗುವೆನು. (ದಂಡಪ್ರಣಾಮ ಮಾಡುವನು.)

**ನಾರದ:**—(ಆದರದಿಂದ ಅವನನ್ನು ಮೇಲಕ್ಕೆತ್ತಿ) ಶ್ರೇಯೋಸ್ತು.

(ನೇಪಥ್ಯದಿಂದ "ಅಯ್ಯೋ!" ಎಂದು ನರಳಿದ ಧ್ವನಿಯು ಕೇಳಿಸುವುದು.)

**ವಾಮದೇವ:**—(ನೇಪಥ್ಯದ ಕಡೆಗೆ ನೋಡಿ) ಅಯ್ಯೋ! ವೃದ್ಧೆಯೊ ಬ್ಬಳು ನೆಲದಮೇಲೆ ಬಿದ್ದಿರುವಳು. ಪೂಜ್ಯರೆ! ನೋಡಿಕೊಂಡು

ಬರುವೆನು. ನಾನು ಹೋಗುವುದು ತಮ್ಮಲ್ಲಿ ಅಪಚಾರವೋ ಏನೋ! ಮನ್ನಿಸಬೇಕು. (ವಾಮದೇವನೂ ನಚಿಕೇತನೂ ಹೋಗುವರು.)

**ನಾರದ:**—ಈ ಮಹರ್ಷಿಯು ಎಂತಹ ಉದಾರಚರಿತನು! ಹಿರಣ್ಯಗರ್ಭದೇವನ ಅಪ್ಪಣೆಯಂತೆ ಇಲ್ಲಿಗೆ ಬಂದ ನಾನು, ಈತನ ಶಿಷ್ಯಪ್ರಿಯತೆಯನ್ನು ನೋಡಿ ವಿಸ್ಮಿತನಾಗಿರುವೆನು. ಮುಂದೆ ಮಹಾಪುರುಷನಾಗುವ ನಚಿಕೇತನಿಗೆ ಈತನು ತಕ್ಕ ಗುರುವೆಂದೇ ತೋರುವುದು. ಈತನೆದುರಿಗೆ ಒಂದು ಮಾಯಾ ದೃಶ್ಯವನ್ನು ಅಳವಡಿಸಿರುವೆನು. ಈತನ ನಿಸ್ಪೃಹತೆಯನ್ನು ಈಗ ಪರೀಕ್ಷಿಸಿ ನೋಡುವೆನು. ವತ್ಸ ನಚಿಕೇತನಿಗೆ ಅಗ್ನಿ ವಿದ್ಯೆಯನ್ನು ಕಲಿಯಬೇಕೆಂಬ ಅಭಿಲಾಷೆ ಹುಟ್ಟಿರುವುದನ್ನು ಹಿರಣ್ಯಗರ್ಭನಿಗೆ ಆನಂದದಿಂದ ಬಿನ್ನವಿಸುವೆನು.

**ವಾಮದೇವ:**—(ವೃದ್ಧೆಯೊಬ್ಬಳ ಎಡದ ರಟ್ಟೆಯನ್ನು ಹಿಡಿದುಕೊಂಡು ನಚಿಕೇತನೊಡನೆ ಪ್ರವೇಶಿಸಿ) ತಾಯಿ! ನೀನಾರು? ಈ ವಯಸ್ಸಿನಲ್ಲಿ ಅಷ್ಟು ದೂರದಿಂದ ಪ್ರಯಾಣವೆ?

**ವೃದ್ಧೆ:**—ಎಲೈ ಉಪಕಾರಿಯೆ! ನಾನು ಮಾತನಾಡಲಾರೆ. ನನಗೆ ಅಂತರ್ದಾಹ. ನಾನು ಎಡವಿ ಬಿದ್ದ ಗಾಯಕ್ಕೆ ನೀನು ನಿನ್ನ ಉತ್ತರೀಯವನ್ನೇ ಹರಿದು ಬಟ್ಟೆಯನ್ನು ಕಟ್ಟಿ ಉಪಕಾರ ಮಾಡಿದೆ. ನನ್ನ ದಾಹವನ್ನೂ ಅಡಗಿಸು.

(ವಾಮದೇವರು ನಚಿಕೇತನ ಕಿವಿಯಲ್ಲಿ ಏನನ್ನೋ ಹೇಳುವರು. ಅವನಿಂದ ಕಲಶವನ್ನು ಅವರು ತೆಗೆದುಕೊಳ್ಳುವರು. ಅವನು ಆಶ್ರಮದ ಕಡೆಗೆ ಓಡಿಹೋಗುವನು.)

**ವಾಮದೇವ:**—ತಾಯಿ! ನಿನ್ನ ಸೇವೆಯಿಂದ ಧನ್ಯನಾದೆನು. ಶೀಘ್ರದಲ್ಲಿಯೇ ನನ್ನ ಶಿಷ್ಯರು ನೀರನ್ನು ತರುವರು.

**ವೃದ್ಧೆ**:—ನಿನ್ನ ಕೈಯಲ್ಲಿರುವ ಕಲಶವು ಬರಿಯದೆ?

**ವಾಮದೇವ**:—ಇದರಲ್ಲಿ ತೀರ್ಥೋದಕವುಂಟು. ಇದನ್ನಿತ್ತರೆ ವ್ರತಭಂಗವಾಗುವುದೆಂದು ಶಂಕಿಸುವೆನು.

**ವೃದ್ಧೆ**:—ನನಗೆ ಪ್ರಾಣವೇ ಹತ್ತಿಬರುತ್ತಿದೆ. ವ್ರತಭಂಗದ ಶಂಕೆಗಿಂತ ಹೆಚ್ಚಾಗಿ ಸ್ತ್ರೀಹತ್ಯಕ್ಕೆ ಹೆದರಬೇಕಲ್ಲವೆ? ನೀನು ನೀರನ್ನು ಕೊಟ್ಟರೆ, ನಾನು ದಾಹದ ಬಾಧೆಯಿಲ್ಲದೆ ಪ್ರಾಣವನ್ನು ಬಿಡುವೆನು.

**ವಾಮದೇವ**:—ಪೂಜ್ಯರಾದ ನಾರದ ಮಹರ್ಷಿಗಳೆ! ತಾವೇ ನನಗೆ ಗುರುಲಾಘವವನ್ನು ಹೇಳಬೇಕೆಂದು ಪ್ರಾರ್ಥಿಸುವೆನು.

**ನಾರದರು**:—(ಅಲ್ಪಸ್ವಲ್ಪ ಹುಸಿನಗೆಯಿಂದ) ನಾನು ಹೇಳತಕ್ಕುದೇನುಂಟು? ವ್ರತಭಂಗಕ್ಕೆಡೆಗೊಡುವುದು ಯುಕ್ತವಾದೀತೆ?

**ವೃದ್ಧೆ**:—ಅಂತರ್ದಾಹ! ಅಂತರ್ದಾಹ! ನೀರನ್ನು ಹುಡುಕುವೆನು. (ಹೋಗುವಳು.)

**ವಾಮದೇವ**:—ತಾಯೆ! ತೀರ್ಥಾಭಿಮಾನದೇವತೆ! ನನ್ನನ್ನು ಮನ್ನಿಸು. ವ್ರತಭಂಗವಾಗುವುದಾದರೆ ನನಗೆ ಶಿಕ್ಷೆಯಾಗಲಿ. ಪೂಜ್ಯೆಯಾದ ಈಕೆಯು ಸುಖವಾಗಿದ್ದರೆ ಸಾಕು. ವ್ರತಭಂಗದ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸುವೆನು. (ವೃದ್ಧೆಯನ್ನುದ್ದೇಶಿಸಿ) ತಾಯೆ! ತಾಯೆ! ಇದೋ, ತೀರ್ಥೋದಕವು. ನಿನ್ನ ದಾಹವು ಶಾಂತವಾಗಲಿ. ಇದನ್ನು ಸ್ವೀಕರಿಸು. (ಹೋಗುವನು, ಮತ್ತೆ ಪ್ರವೇಶಿಸುವನು.)

**ನಾರದ**:—(ಗಹಗಹಿಸಿ ನಕ್ಕು) ಮಹರ್ಷಿಗಳಿಗೂ ಈ ಬಗೆಯ ಅವಿವೇಕವೆ? ನಿಯಮವನ್ನರಿತು ವರ್ತಿಸದೆ ವ್ರತಭಂಗವನ್ನು ತಂದುಕೊಳ್ಳುವುದೆ?

**ವಾಮದೇವ**:—ಪೂಜ್ಯರೆ! ವ್ರತವು ಸಾಂಗವಾಗಿಯೇ ಪೂರೈಸಿತಲ್ಲವೆ? ಮಾತೃಭಾವನೆಯಿಂದ ಆ ಪೂಜ್ಯಳಿಗೆ ತೀರ್ಥೋ

ದಕವನ್ನಿತ್ತೆನು. ಜಗಜ್ಜನನಿಯಾದ ಪೃಥ್ವೀದೇವಿಯು ಇದನ್ನು ಮೆಚ್ಚುವಳೆಂದೇ ನನ್ನ ಭಾವನೆ. ಆ ಮಹಾತಾಯಿ ಎಲ್ಲರಲ್ಲಿಯೂ ನೆಲಸಿರುವಳಲ್ಲವೆ? ಅವಳಿಲ್ಲದೆಡೆಯುಂಟೆ? ನನ್ನ ಸೇವೆಯಿಂದಲೂ ಧ್ಯಾನದಿಂದಲೂ ಮೆಚ್ಚಿ ಸರಸ್ವತೀ ದೇವಿಯು ಮಾತ್ರ ಹತಭಾಗ್ಯನಾದ ನನಗೆ ಪ್ರಸನ್ನ ಳಾಗಿಲ್ಲ. ಪೂಜ್ಯರೇ! ಸರಸ್ವತೀದೇವಿಯು ನನಗೆ ಪ್ರಸನ್ನ ಳಾಗುವಂತೆ ಯೋಗಸಿದ್ಧಿಯ ವರವನ್ನು ದಯಪಾಲಿಸಿ ಉದ್ಧಾರ ಮಾಡಿ. ಅವಳಿಂದ ನನ್ನ ಅಭೀಷ್ಟವು ನೆರವೇರಲಿ.

**ನಾರದ**:—ನಿಮಗಿರುವ ಅಭೀಷ್ಟವಾವುದು?

**ವಾಮದೇವ**:—ನನ್ನ ಶಿಷ್ಯರು ನನ್ನನ್ನು ಮೀರಿಸುವಂತೆ ಅನುಗ್ರಹಿ ಸೆಂದು ಪ್ರಾರ್ಥಿಸುವುದು. ವತ್ಸ ನಚಿಕೇತನು ಮುಂದೆ ಎಂದಿಗೂ ತನ್ನ ತಂದೆಯಂತೆ ಭೋಗಪ್ರಿಯತೆಯ ಮಡುವಿಗೆ ಧುಮ್ಮಿಕ್ಕದೆ ಸಾತ್ವಿಕ ಶ್ರೇಷ್ಠನಾಗಿ ಜಗತ್ತಿಗೇ ಮಾರ್ಗದರ್ಶಕ ನಾಗುವಂತೆ ಅನುಗ್ರಹಮಾಡೆಂದು ಬೇಡುವುದು.

**ನಾರದ**:—ಸರಸ್ವತೀದೇವಿಯಲ್ಲಿ ತಮಗಾಗಿ ಏನನ್ನು ಪ್ರಾರ್ಥಿಸುವಿರಿ? ಇದೆಲ್ಲ ಪರಕೀಯರಿಗಾಯಿತು. ತಮಗಾಗಿ?

**ವಾಮದೇವ**:—ನನಗಾಗಿ......ನನಗಾಗಿ.......ಒಂದೂ ಇಲ್ಲ. ನನ್ನ ಮೆಚ್ಚಿನ ಶಿಷ್ಯರೇ ನನ್ನ ಪ್ರಾಣದ ಪ್ರಾಣ. ನನ್ನ ಉಸಿರಿನ ಉಸಿರು. ನನ್ನ ನಚಿಕೇತನೇ ನನ್ನ ಕಣ್ಣಿನ ಬೆಳಕು. ಸ್ವಾರ್ಥ ಸಾಧನೆಯಿಂದ ಹಾಳಾಗಲೆ? ವಾಗೀಶ್ವರಿಯ ಮುಂದೆನಿಂತು ಸ್ವಪ್ರಯೋಜನವನ್ನು ಕುರಿತು ಯಾಚಿಸಲೆ? ಅರಳು ಮಲ್ಲಿಗೆಗೆ ಮತ್ತಷ್ಟು ನವಸೌರಭವನ್ನು ಕರುಣಿಸೆನ್ನದೆ, ಶುಷ್ಕ ವೃಕ್ಷವು ಚಿಗುರಬೇಕೆಂದು ಬೇಡಲೆ?

**ನಾರದ**:—ನಚಿಕೇತನಿಗೆ ತಾವು ದೊರೆತುದು ಸ್ವಾತಿಯ ಹನಿಗೆ ಮುತ್ತಿನ ಚಿಪ್ಪಿನ ಆಶ್ರಯವೇ ದೊರೆತಹಾಗಾಯಿತು.

**ವಾಮದೇವ**:—ಇಲ್ಲ. ಇಲ್ಲ. ದೇವರ್ಷಿಗಳಾದ ತಮಗೆ ಯಾವುದೂ ಅಗೋಚರವಲ್ಲ. ನಚಿಕೇತನ ಪ್ರಚಂಡ ಮೇಧಾಶಕ್ತಿಯ ಮುಂದೆ ನನ್ನ ಬೋಧನೆಯು ಇನ್ನು ಹೆಚ್ಚುಕಾಲ ಸಾಗದು. ಈಗಲೇ ಅವನ ಅನೇಕ ಪ್ರಶ್ನೆಗಳಿಗೆ ನಾನು ಉತ್ತರಕೊಡಲಾರೆ. ಅವನಲ್ಲಿ ನೆಲೆಗೊಂಡಿರುವ ಜನ್ಮಾಂತರ ಸಂಸ್ಕಾರವು ಅದ್ಭುತ ವಾದುದು. ಅವನ ಪ್ರಶ್ನೆಗಳಿಗೆ ಸದುತ್ತರಗಳನ್ನಿತ್ತು ಅವನ ಹೃದಯ ಮನಸ್ಸುಗಳನ್ನು ಬಿಳಿದಾವರೆಯಂತೆ ಅರಳಿಸುವ ಸಾಮರ್ಥ್ಯವನ್ನು ದಯಪಾಲಿಸೆಂದು ನಾನು ಸರಸ್ವತೀ ದೇವಿಯನ್ನು ಪ್ರಾರ್ಥಿಸುತ್ತಿದ್ದೇನೆ. ದೇವಿಯು ಇನ್ನೂ ಅನುಗ್ರಹ ಮಾಡಿಲ್ಲ. ಇದರಿಂದ ನನಗೆ ಮನೋವ್ಯಥೆ. (**ನೇಪಥ್ಯದ ಕಡೆಗೆ ನೋಡಿ**) ವೃದ್ಧೆಯು ಮಾಯವಾಗಿದ್ದಾಳೆ! (**ಸ್ವಲ್ಪ ಯೋಚಿಸಿ ಕಾತರತೆಯಿಂದ**) ಅಯ್ಯೋ! ನನ್ನ ಬುದ್ಧಿಗೆ ಮಂಕುಕವಿಯಿತು. ದೇವಿಯೇ ನನ್ನ ಪರೀಕ್ಷೆಗಾಗಿ ಆ ರೂಪದಲ್ಲಿ ಬಂದಿದ್ದಳೆಂದು ತೋರುವುದು. ಆಕೆಯ ಕಾಲಿಗೆರಗಿ ಪೂಜಿಸಬೇಕಾಗಿದ್ದಿತು. ನಿಜವಾಗಿಯೂ ನಾನು ಅಭಾಗ್ಯ. ತಾಯೆ, ಮನ್ನಿಸಿ ಕಾಪಾಡು. (ನೀರಿನ ಕಲಶದೊಡನೆ ಬಂದ ನಚಿಕೇತನನ್ನು ನೋಡಿ) ವತ್ಸ! ಮತ್ತೆ ನೀನೇ ಬಂದು ಆಯಾಸಪಟ್ಟೆಯಾ ಕಂದ! (ಆದರದಿಂದ ಅವನ ಗಲ್ಲವನ್ನು ಮುಟ್ಟಿ ತಲೆಯನ್ನು ಅಂಗೈಯಿಂದ ಸ್ಪರ್ಶಿಸುವರು)

**ನಚಿಕೇತ**:—ಗುರುಸೇವೆಯು ಆಯಾಸವೆಂದು ತೋರುವ ದುರ್ದಿನವು ಬಾರದಂತೆ ಆಶೀರ್ವದಿಸಿ. ಆ ಪೂಜ್ಯೆಯೆಲ್ಲಿ?

**ನಾರದ**:—ತೀರ್ಥೋದಕವೇ ದೊರೆತು ಆಕೆಗೆ ದಾಹ ಪರಿಹಾರ ವಾಯಿತು.

**(ಕೊಂಬು ಕಹಳೆಗಳು ಮೊಳಗುತ್ತಿರುವಲ್ಲಿ ಅಶ್ವಸೇನ ಮಹಾರಾಜನ ಕಡೆಯವರು ಶಿಬಿಕೆಯೊಡನೆ ಪ್ರವೇಶಿಸುವರು.)**

**ರಾಜಪುರುಷ:**—ಮಹರ್ಷಿಗಳೀರ್ವರಿಗೂ ವಂದಿಸುವೆನು. (ಆವ ರೀರ್ವರೂ ಕೈಯೆತ್ತಿ ಆಶೀರ್ವದಿಸುವರು) ವಾಮದೇವಮಹರ್ಷಿ ಗಳವರಲ್ಲಿ ನಮ್ಮ ಮಹಾರಾಜನ ಸವಿನಯ ಪ್ರಾರ್ಥನೆ ಯುಂಟು.

**ವಾಮದೇವ:**—ಮಹಾರಾಜನು ಕುಶಲಿಯೆ ? ನೀವೆಲ್ಲರೂ ಕ್ಷೇಮವೆ ?

**ರಾಜಪುರುಷ:**—ತಮ್ಮ ಕೃಪಾಮಹಿಮೆಯಿಂದಲೂ, ಆಶೀರ್ವಚನ ಗಳಿಂದಲೂ ಎಲ್ಲರೂ ಕ್ಷೇಮ. ಮಹಾರಾಜನು ಆಚರಿಸುವ ಯಜ್ಞದಲ್ಲಿ ತಾವು ಅನುಗ್ರಹಮಾಡಿ ಆಚಾರ್ಯಪೂಜೆಯನ್ನು ಸ್ವೀಕರಿಸಿ ಕೃಪೆಮಾಡಬೇಕೆಂಬುದು ಆತನ ಪ್ರಾರ್ಥನೆ. ಪೂರ್ಣ ಕುಂಭವೇ ಮುಂತಾದ ಸಮಸ್ತ ಮರ್ಯಾದೆಗಳಿಂದೊಡಗೂಡಿ ಭಕ್ತ್ಯುತ್ಸಾಹಗಳಿಂದ ಬಂದಿರುವೆವು.

**ವಾಮದೇವ:**—ನಾರದಮಹರ್ಷಿಗಳೆ! ತಮ್ಮಂತಹ ಮಹಾತ್ಮರನ್ನು ನೋಡಿ ಪವಿತ್ರನಾಗಿ ಆನಂದಿಸಿದೆನು. ಈಗ ಲೋಕ ವಾಸನೆಯಲ್ಲಿ ಭಾಗಿಯಾಗುವ ದುರವಸ್ಥೆಯೊದಗಬೇಕೆ ?

**ರಾಜಪುರುಷ:**—(ಸ್ವಗತ) ಇವರು ನಾರದಮಹರ್ಷಿಗಳೆ! ಇವರ ದರ್ಶನದಿಂದ ಕೃತಾರ್ಥನಾದೆನು. (ನಮುಸ್ಕರಿಸುವನು. ನಾರದರು ಆಶೀರ್ವದಿಸುವರು.)

**ನಾರದ:**—ಪುಷ್ಪದ ಪರಿಮಳವು ಪುಷ್ಪಕ್ಕೆಂದಿಗೂ ಗೋಚರಿ ಸದು. ಸಮಸ್ತವೂ ಭಗವಂತನಾದ ಹಿರಣ್ಯಗರ್ಭನ ಸೇವೆ ಯೆಂಬ ಭಾವನೆಯಿಂದ ಅವಶ್ಯವಾಗಿ ಹೋಗಿ ಬನ್ನಿ.

**ವಾಮದೇವ:**—(ಆಲೋಚಿಸಿ) ಮಹದಾಜ್ಞೆ. ತಮ್ಮ ಪಾದಧೂಳಿ ಯಿಂದ ನಮ್ಮ ಆಶ್ರಮವನ್ನು ಪವಿತ್ರಗೊಳಿಸಬೇಕೆಂದು ಬೇಡುವೆನು. (ರಾಜಪರಿವಾರದವರ ಕಡೆಗೆ ತಿರುಗಿ) ನೀವುಗಳೂ

ಆಶ್ರಮಕ್ಕೆ ಬಂದು ನಮ್ಮ ಅಲ್ಪವಾದ ಸತ್ಕಾರವನ್ನು ಸ್ವೀಕರಿಸಿ ಉಪಕರಿಸಬೇಕು.

**ರಾಜಪುರುಷ**:—ಅಪ್ಪಣೆ.

**ವಾಮದೇವ**:—ಆಶ್ರಮಕ್ಕೆ ಹೋಗೋಣ. (ನಾರದರನ್ನು ಕುರಿತು) ಬಿಜಯಮಾಡಿಸಬೇಕೆಂದು ಬೇಡುವೆನು.

(ಎಲ್ಲರೂ ಹೋಗುವರು)

## ದೃಶ್ಯ ೨

[ರಾಜಪುರೋಹಿತ ವಾಜಶ್ರವಸರ್ಷಿಯು ಮನೆಯ ಹೋಗುವ ಮಾರ್ಗ. ನಂದಿನೀದೇವಿಯು ಬಿಂದಿಗೆಯೊಂದನ್ನು ಹಿಡಿದು ಪ್ರವೇಶಿಸುವಳು. ಅವಳ ಹಿಂದೆ ಅವಳ ಪುತ್ರಿ ಸುಕನ್ಯೆಯು "ಅಮ್ಮಾ, ಅಮ್ಮಾ" ಎಂದು ಕೂಗುತ್ತ ಪ್ರವೇಶಿಸುವಳು.]

**ನಂದಿನೀದೇವಿ:**—(ಮಗಳ ಕಡೆಗೆ ತಿರುಗಿ, ಸರ್ವಾಭರಣ ಭೂಷಿತೆಯಾಗಿ ನೀಲವರ್ಣದ ಚೀನಾಂಬರವನ್ನೂ, ಕೆಂಪುವರ್ಣದ ಚೀನಾಂಬರದ ಕುಪ್ಪಸವನ್ನೂ, ಮುತ್ತಿನೆಳೆಯಿಂದಕೂಡಿದ ಮತ್ತು ಕೆಂಪುವಜ್ರಗಳು ಕೆತ್ತಿರುವ ಅರಳೆಲೆಯನ್ನೂ, ಧರಿಸಿ ನಗೆಮಲ್ಲಿಗೆಯನ್ನು ಸೂಸುತ್ತ ಬರುತ್ತಿರುವ ಸುಕನ್ಯೆಯ ರೂಪದಿಂದಲೂ ಅಲಂಕಾರದಿಂದಲೂ ಮುಗ್ಧಳಾಗಿ ಆನಂದಿಸುತ್ತ, ಬಿಂದಿಗೆಯನ್ನು ನೆಲದ ಮೇಲಿಟ್ಟು ಅವಳನ್ನು ಆಲಿಂಗಿಸಿ) ಹುಚ್ಚುಹುಡುಗಿ! ಯಾರಿಗೆ ಎಷ್ಟು ಸಲ ನಿನ್ನ ಅಲಂಕಾರವನ್ನು ತೋರಿಸಿದರೂ ನಿನಗೆ ತೃಪ್ತಿಯಿಲ್ಲ. ಅಲ್ಲವೆ ?

**ಸುಕನ್ಯೆ:**—(ಅತಿ ಸ್ವಲ್ಪ ಅಸಮಾಧಾನವನ್ನು ಸೂಚಿಸಿ) ಹಾಗಾದರೆ ನಾನು ಚೆನ್ನಾಗಿಲ್ಲವೇನಮ್ಮ ? ಈ ಒಡವೆಗಳನ್ನೆಲ್ಲಾ ತೆಗೆದು ಹಾಕಿ ಬಿಡಮ್ಮ. ಇವೊಂದೂ ನನಗೆ ಬೇಡ.

**ನಂದಿನೀದೇವಿ:**—ಅಬ್ಬ! ನೀನು ಕೋಪಿಸಿಕೊಳ್ಳುವುದು ಬಹು ಬೇಗ. ನೀನು ಚೆನ್ನಾಗಿಲ್ಲವೆ! (ಪಾರ್ಶ್ವಕ್ಕೆ ನಿಲ್ಲಿಸಿಕೊಂಡು ಭುಜದ ಮೇಲೆ ಕೈಹಾಕಿ ಗಲ್ಲವನ್ನು ಅಂಗೈಯಲ್ಲಿ ಹಿಡಿದು) ಅರಗಿಣಿಯು ಆರಿಸುವ ಹಣ್ಣಿನಂತಿರುವೆ. ಸರ್ವಾಲಂಕೃತೆಯಾದ ಸಾವಿತ್ರೀ ದೇವಿಯಂತಿರುವೆ. ಆದರೂ, ಆದರೂ, ನಿನಗೆ ಎಷ್ಟು ಪ್ರೀತಿಯೇ ಅಲಂಕಾರದಲ್ಲಿ !

**ಸುಕನ್ಯೆ:**—(ನಗುತ್ತ ತಾಯಿಯ ಮುಖವನ್ನೇ ಆನಂದಾಧಿಕ್ಯದಿಂದ ದೃಷ್ಟಿಸಿ ನೋಡಿ) ಎಷ್ಟು ಹೊತ್ತಿಗಮ್ಮಾ ರಾಜಸಭೆಗೆ ಹೋಗು ವುದು? ಈ ದಿನ ತಂದೆಗೆ ಅಲ್ಲಿ ಆಚಾರ್ಯಪೂಜೆ. ಅಣ್ಣಾ ಬರಲಿಲ್ಲವಲ್ಲ. (ಸಂತೋಷಕ್ಕಾಗಿ ಚಪ್ಪಾಳೆ ಹೊಡೆದು) ಅಣ್ಣಾನೂ ಬಂದುಬಿಟ್ಟರೆ!

**ನಂದಿನೀದೇವಿ:**—(ಪ್ರೀತ್ಯಾದರಗಳಿಂದ ಸುಕನ್ಯೆಯ ಬೆನ್ನನ್ನು ಸವ ರುತ್ತ) ಅಣ್ಣಾನೂ ಬಂದುಬಿಟ್ಟರೆ! ಈ ಹುಡುಗಿಯ ಅಲಂಕಾರ ವನ್ನು ನೋಡಿಬಿಟ್ಟರೆ! (ನಗುವಳು)

**ವಾಜಶ್ರವಸ:**—(ಪ್ರವೇಶಿಸಿ) ಮಹಾರಾಜನು ಯಜ್ಞವನ್ನು ಸಾಂಗ ವಾಗಿ ಪೂರ್ತಿಗೊಳಿಸಿ ಈ ದಿನ ನನಗೆ ಆಚಾರ್ಯ ಪೂಜೆ ಯನ್ನು ಸಲ್ಲಿಸುತ್ತಾನೆ. ಎಲ್ಲೆಲ್ಲಿ ನೋಡಿದರೂ ಸಂತೋಷದ ಕೋಲಾಹಲವೇ ತುಂಬಿದೆ. ಆದರೂ ನೀನು ರಾಜಸಭೆಗೆ ಬರುವ ಯೋಚನೆಯನ್ನೇ ಮಾಡಿಲ್ಲವೆಂದು ತೋರುವುದು.

**ನಂದಿನೀದೇವಿ:**—ತಮಗೆ ಆಚಾರ್ಯಪೂಜೆಯನ್ನು ಸಲ್ಲಿಸುವುದಾಗಿ ಮಹಾರಾಜನು ವಾಗ್ದಾನ ಮಾಡಿದ್ದಾನೆಯೆ?

**ವಾಜಶ್ರವಸ:**—(ನಕ್ಕು) ಈಗಲೀಗ ಚೆನ್ನಾಯಿತು. ಮಹಾರಾಜನು ನನ್ನನ್ನು ಋತ್ವಿಜನನ್ನಾಗಿ ನೇಮಕಮಾಡಲಿಲ್ಲ. ಅದರ ಅರ್ಥ ವೇನು? (ತಲೆಗೆ ಸುತ್ತಿರುವ ಶಾಲನ್ನೂ, ಹೊದೆದಿರುವ ಶಾಲನ್ನೂ, ಬೆರಳುಗಳಿಗೆ ಧರಿಸಿರುವ ವಜ್ರದುಂಗುರಗಳನ್ನೂ ತೋರಿಸಿ) ಅಮೂ ಲ್ಯವಾದ ಈ ಮೆಚ್ಚುಗಳನ್ನು ಮಹಾರಾಜನು ನನಗೆ ಕೊಟ್ಟು ವಿಶೇಷವಾಗಿ ಗೌರವಿಸುತ್ತಿದ್ದಾನೆ. ಇದರ ಅರ್ಥವೇನು? ಆಚಾರ್ಯಪೂಜೆಗೆ ನಾನು ಮೀಸಲಾಗಿರಬೇಕೆಂಬುದೂ, ನಾನು ದಿವ್ಯಾಲಂಕಾರಭೂಷಿತನಾಗಿ ಸಭೆಗೆಬರಬೇಕೆಂಬುದೂ, ಆತನ ಆಶಯವೆಂದು ಸ್ಪಷ್ಟವಾಗುವುದಿಲ್ಲವೆ? ಮಹಾರಾಜನು ಇದೇ ತಾನೆ ಸೊಗಸಾದ ಧೋತ್ರಗಳನ್ನೂ ಕಳುಹಿಸಿದ್ದಾನೆ.

(ಬಿಂದಿಗೆಯನ್ನು ನೋಡಿ) ಸರಿ. ಆಗಲೇ ಬಿಂದಿಗೆಯು ಕೈಗೆ ಬಂದಿದೆ. ಗಿಡಗಳಿಗೆ ನೀರೆರೆಯಲು ಹೊರಟಂತಿದೆ. ರಾಜಧಾನಿಯಲ್ಲಿರುವವರೆಗೂ ರಾಜಪುರೋಹಿತನ ಪತ್ನಿಯ ಘನತೆಗೆ ತಕ್ಕಂತೆ ವರ್ತಿಸೆಂದು ಅನೇಕ ಸಾರಿ ಹೇಳಿದ್ದೇನೆ. ನೀನು ಲಕ್ಷ್ಯಕೊಡುವುದೇ ಇಲ್ಲ. ಅನೇಕಮಂದಿ ಸೇವಕ ಸೇವಕಿಯರನ್ನು ಮಹಾರಾಜನು ಕಳುಹಿಸಿದ್ದಾನೆ. ಹೀಗಿದ್ದೂ ನೀನೇ ಗಿಡಗಳಿಗೆ ನೀರು ಹಾಕಬೇಕೆ?

**ನಂದಿನೀದೇವಿ:**—ನಚಿಕೇತ ಸುಕನ್ಯೆಯರಿಗೆ ಎಷ್ಟು ಸಂತೋಷದಿಂದ ಸ್ತನ್ಯಪಾನಮಾಡಿಸುತ್ತಿದ್ದೆನೋ ಅಷ್ಟೇ ಸಂತೋಷದಿಂದ ಗಿಡಗಳಿಗೆ ನೀರೆರೆಯಲು ಆಸೆಯಾಗುತ್ತದೆ.

**ನಚಿಕೇತ:**—(ಪ್ರವೇಶಿಸಿ) ಮಾತೆಯೆ, ವಂದಿಸುವೆನು (ನಮಸ್ಕರಿಸಿ ಆಶೀರ್ವಚನವನ್ನು ಕೈಕೊಂಡು) ತಂದೆಯೆ! ನಮಸ್ಕರಿಸುವೆನು. (ನಮಸ್ಕರಿಸುವನು. ನಂದಿನೀದೇವಿಯು ಪ್ರೀತಿ ಸಂಭ್ರಮಗಳಿಂದ ಅವನನ್ನು ಆಲಿಂಗಿಸುವಳು.)

**ಸುಕನ್ಯೆ:**—(ನಮಸ್ಕರಿಸಿ) ಅಣ್ಣ, ಅಣ್ಣ, ವಂದಿಸುವೆನು.

**ನಚಿಕೇತ:**—ಅಮ್ಮಾ! ನಾನು ಗುರುಕುಲಕ್ಕೆ ಹೋದಮೇಲೆ ಆರೇ ವರ್ಷಗಳಲ್ಲಿ ಇವಳೆಷ್ಟು ಬೆಳೆದಿರುವಳಮ್ಮಾ. ಅಬ್ಬ!

**ಸುಕನ್ಯೆ:**—ಅಬ್ಬ! ಇಬ್ಬ! ಇವನು ಬೆಳೆದಿಲ್ಲವೇನೊ. (ನೇಪಥ್ಯದ ಕಡೆಗೆ ಕೈತೋರಿಸಿ) ಅಲ್ಲಿನೋಡಣ್ಣ! ಮುಖವನ್ನು ಕೆಳಗೆ ಮಾಡಿ ನೋಡಬೇಕಾಗಿದ್ದ ಗಿಡಗಳು ಕಣ್ಣನ್ನು ಆಕಾಶಕ್ಕೆ ತಿರುಗಿಸಿ ನೋಡುವಮಟ್ಟಿಗೆ ಎರಡು ಮೂರೇ ವರುಷಗಳಲ್ಲಿ ಬೆಳೆದಿವೆ. (ಗತ್ತಿನಿಂದ ಕೊರಳನ್ನು ಕೊಂಕಿಸಿ ಮುದ್ದುಮುದ್ದಾಗಿ ಮಾತನಾಡುತ್ತ) ನಾನೆಲ್ಲೋ ಸ್ವಲ್ಪ ಬೆಳೆದಿದ್ದೇನೆ. ನನ್ನೇ ಅಂತಾನೆ, ಈ ಅಣ್ಣ. ತಾನೂ ತುಂಬ ಬೆಳೆದಿದ್ದಾನೆ.

**ನಚಿಕೇತ:**—(ತಂಗಿಯ ಕೆನ್ನೆಗೆ ಮುತ್ತಿಟ್ಟು) ಎಷ್ಟು ನಾಲಿಗೆಯಪ್ಪಾ ಈ ಹುಡುಗಿಗೆ! ಬೆಳೆಯಮ್ಮಾ, ಇನ್ನೂ ಬೆಳೆ. ಬೇಡವೆಂದವರಾರು ?

**ಸುಕನ್ಯೆ:**—ನೀನು ಬೇಡವೆಂದರೆ ಬಿಡುವವರಾರೋ ಕಾಣೆ.

**ವಾಜಶ್ರವಸ:**—ನಚಿಕೇತ! ನಿಮ್ಮ ಗುರುಗಳೂ ಬಂದಿದ್ದಾರೊ? ಯಜ್ಞದವೇಳೆಗಂತೂ ಬರಲಿಲ್ಲ. ಈಗಲಾದರೂ ಬಂದರಲ್ಲ.

**ನಚಿಕೇತ:**—ಪೂಜ್ಯರಿಗೆ ಯಜ್ಞದವೇಳೆಗೆ ಬರಲು ಅವಕಾಶವಾಗಲಿಲ್ಲ. ಆದುದರಿಂದ ಆಚಾರ್ಯಪೂಜೆಯ ವೇಳೆಗೆ ಬಿಜಯಮಾಡಿದರು. ನನ್ನನ್ನು ಇಲ್ಲಿಗೆ ಕಳುಹಿಸಿ ಅವರು ಬಿಡಾರಕ್ಕೆ ದಯಮಾಡಿದರು.

**ವಾಜಶ್ರವಸ:**—ನಾನು ಹೊರಡುತ್ತೇನೆ. ಸಾಧ್ಯವಾದಷ್ಟು ಶೀಘ್ರವಾಗಿ ನೀವೆಲ್ಲರೂ ಸಭೆಗೆ ಬನ್ನಿ. (ನಂದಿನೀದೇವಿಯ ಕಡೆಗೆ ತಿರುಗಿ ಮುಗುಳುನಗೆಯಿಂದ) ಆಚಾರ್ಯಪೂಜೆಯು ಪೂರ್ತಿಯಾದಮೇಲೆ ಬರಬೇಡ.

(ಹೋಗುವನು)

**ನಂದಿನೀದೇವಿ:**—(ನಚಿಕೇತನ ಮೈದಡವಿ) ಎಷ್ಟು ಯುಗವಾಯಿತು ಕಂದ, ನಿನ್ನನ್ನು ನೋಡಿ.

**ಸುಕನ್ಯೆ:**—ಅವಳ ಮಾತಿರಲಿ. ಇಲ್ಲಿ ಕೇಳಣ್ಣ. ನನಗೆ ಸೊಗಸಾದ ಎರಡು ಹಾಡುಗಳು ಬರುತ್ತವೆ. ನೀನು ಕೇಳಿದರೆ ಹೇಳುತ್ತೇನೆ.

**ನಂದಿನೀದೇವಿ:**—ಸುಕನ್ಯೆ ಬಹು ಸೊಗಸಾಗಿ ಹಾಡುತ್ತಾಳೆ. ನೀನು ಕೇಳುತ್ತಿರು. ಗಿಡಗಳಿಗೆ ನೀರೆರೆದು ಈಗಲೇ ಬಂದುಬಿಡುತ್ತೇನೆ.

**ನಚಿಕೇತ:**—ಗಿಡಗಳಿಗೆ ನೀರೆರೆಯಲು ನನಗೂ ಆಸೆ. ನಾನೂ ನಿನ್ನ ಜೊತೆಗೆ ಬರುತ್ತೇನೆ.

ನಂದಿನೀದೇವಿ:—ಬ್ರಾಹ್ಮೀಮುಹೂರ್ತದಲ್ಲಿದ್ದಾಗಲೇ ಗಿಡಗಳಿಗೆ ನೀರೆರೆದಿದ್ದೇನೆ. ಇನ್ನು ಎರಡು ಪಾತಿಗಳು ಮಾತ್ರವೇ ಉಳಿದಿವೆ. ಹಾಡು ಮುಗಿಯುವ ವೇಳೆಗೆ ಬಂದುಬಿಡುತ್ತೇನೆ. (ಬಿಂದಿಗೆಯನ್ನು ತೆಗೆದುಕೊಂಡು ಹೋಗುವಳು.)

ಸುಕನ್ಯೆ:—ಅಣ್ಣ! ನನ್ನ ಹಾಡನ್ನು ನೀನು ಸರಿಯಾಗಿ ಕೇಳಬೇಕು. (ಹಾಡನ್ನು ಹೇಳುವಳು.)

ನಚಿಕೇತ:—ಸೊಗಸಾಗಿ ಹೇಳಿದೆ. ತಂಗಿ! ನೀನು ಬಹು ಜಾಣೆ.

(ಸುಕನ್ಯೆಯು ಮನೆಯೊಳಕ್ಕೆ ಓಡಿಹೋಗುವಳು. ನಂದಿನೀ ದೇವಿಯು ಎದುರು ಪಾರ್ಶ್ವದಿಂದ ಪ್ರವೇಶಿಸುವಳು.)

ನಚಿಕೇತ:—ಗಿಡಗಳಿಗೆ ನೀರೆರೆದು ಆಯಾಸವಾಗಿದೆಯೇನಮ್ಮ? ನಾನೂ ಬರಬೇಕೆಂದಿದ್ದೆ. ನೀನು ಬೇಡವೆಂದೆ.

ನಂದಿನೀದೇವಿ:—(ಸ್ವಗತ) ನಮ್ಮ ನಚಿಕೇತನು ಎಷ್ಟು ಗುಣಶಾಲಿ! (ಪ್ರಕಾಶ) ಇಲ್ಲ, ಕಂದ, ಆಯಾಸವಾಗಿಲ್ಲ.

ಸುಕನ್ಯೆ:—(ಒಂದು ಹರಿವಾಣದಲ್ಲಿ ಸುವರ್ಣಕಾಂತಿಯಿಂದ ಹೊಳೆಯುತ್ತಿರುವ ಉತ್ತರೀಯವನ್ನೂ, ರತ್ನಖಚಿತವಾದ ಕೆಲವು ಆಭರಣಗಳನ್ನೂ ತೆಗೆದುಕೊಂಡು ಪ್ರವೇಶಿಸಿ) ನಿನಗಾಗಿ ಇವುಗಳನ್ನು ಮಹಾರಾಜನು ನಿನ್ನೆಯೇ ಕಳುಹಿಸಿದ್ದಾನೆ. ಅಮ್ಮನಿಗೆ ಸೊಗಸಾದ ಸೀರೆ ಕುಪ್ಪಸಗಳೂ ಬಂದಿವೆ. ಅಣ್ಣ, ಅಣ್ಣ, ಇವುಗಳನ್ನು ಧರಿಸಣ್ಣ. ನೋಡಿ ಸಂತೋಷಪಡುವೆನು.

ನಂದಿನೀದೇವಿ:—(ಉತ್ತರೀಯವನ್ನು ಹೊದ್ದಿಸಿ, ಅಭರಣಗಳಿಂದ ಅಲಂಕರಿಸಿ) ಇವುಗಳು ನಿನಗೆ ಬಹಳ ಸೊಗಸಾಗಿ ಒಪ್ಪುವುವು, ಕಂದ. ಸುಕನ್ಯೆಯ ಸಡಗರವನ್ನು ನೋಡು. ಮನೆಯೊಳಕ್ಕೆ ಹೋಗುವ ಮೊದಲೇ ಇಲ್ಲಿಗೇ ಇವುಗಳನ್ನು ತಂದಿದ್ದಾಳೆ.

**ಸುಕನ್ಯೆ**:—ಅಣ್ಣನ ಅಲಂಕಾರವು ಎಷ್ಟು ಚೆನ್ನಾಗಿದೆಯಮ್ಮ!

**ನಚಿಕೇತ**:—ತುಚ್ಛವಾದ ಈ ಅಲಂಕಾರಗಳಿಂದ ಏನುಪ್ರಯೋಜನ! ಸರ್ವೇಶ್ವರನಾದ ಹಿರಣ್ಯಗರ್ಭನ ಮೇಲಣ ಭಕ್ತಿಯೇ ಸೌಭಾಗ್ಯದಾಯಕವಾದ ಅಮೂಲ್ಯ ಭೂಷಣ.

**ಸುಕನ್ಯೆ**:—ಇವುಗಳಿಂದ ಪ್ರಯೋಜನವಿಲ್ಲವೆ? ಇಲ್ಲವೆ? ಇಲ್ಲವೆ?

**ನಚಿಕೇತ**:—ಇಲ್ಲ.

**ಸುಕನ್ಯೆ**:—ಹಾಗಾದರೆ ದೇವರೇ ಇದನ್ನೂ ಸೃಷ್ಟಿಸಿಲ್ಲವೇನು? ದೇವರು ಸೃಷ್ಟಿಸಿರುವ ಸುಂದರ ವಸ್ತುಗಳಿಂದ ಆನಂದವನ್ನನುಭವಿಸಕೂಡದೇನು? ಕೂಡದೆಂದರೆ ಅವನೆಂತಹ ದೇವರು. ಅಮ್ಮಾ! ಅಣ್ಣನ ಗುರುಗಳು ದೊಡ್ಡವರೆಂದೆ. ಅವರು ಅಣ್ಣನಿಗೆ ಹುಚ್ಚುಹಿಡಿಸಿದ್ದಾರೆ.

**ನಂದಿನೀದೇವಿ**:—(ನಕ್ಕು) ನೀನು ಅಧಿಕ ಪ್ರಸಂಗಿ. ನಿನಗೆ ತಿಳಿಯದ ವಿಚಾರಗಳಲ್ಲಿಯೂ ಸಿದ್ಧಾಂತಕ್ಕೆ ಹೊರಡುವೆ.

**ಸುಕನ್ಯೆ**:—ಸರಿ. ನೀನೂ ಆ ಸೀರೆಯನ್ನುಡುವುದಿಲ್ಲವೆಂದು ಹೇಳಿದ್ದೀಯೆ. ನೀವಿಬ್ಬರೂ ಒಂದೇಜಾತಿಗೆ ಸೇರಿದವರು.

**ನಚಿಕೇತ**:—ಅಮ್ಮಾ! ನಿನ್ನನ್ನು ಒಂದು ಸಂಗತಿಯನ್ನು ಕೇಳಲು ಬಹು ಕುತೂಹಲ. ಆದರೆ ಅವಿನಯವಾದೀತೆಂದು ಭಯ. ತಂದೆಯು ಮಹರ್ಷಿಗಳ ವಂಶದಲ್ಲಿ ಹುಟ್ಟಿಯೂ ಹೀಗೇಕೆ ಆಚರಿಸುವರಮ್ಮ? ರಾಜ ಪೌರೋಹಿತ್ಯವನ್ನಂಗೀಕರಿಸಿರುವುದು ನ್ಯಾಯವೇನಮ್ಮ? ಅದು ನ್ಯಾಯವಾಗಿದ್ದು ನನ್ನದೇ ತಪ್ಪು ತಿಳಿವಳಿಕೆಯಿರಬಹುದು. ಹಾಗಿದ್ದರೆ ಮನ್ನಿಸಮ್ಮ.

**ನಂದಿನೀದೇವಿ**:—ಕಂದ! ಅವರ ನಿಜಸ್ವಭಾವವನ್ನು ನೀನರಿಯೆ. ಅವರೂ ಇಷ್ಟರಲ್ಲೇ ಪೂರ್ವದ ತಪೋವನಕ್ಕೆ ಹಿಂದಿರುಗ

ಬೇಕೆಂದು ಯೋಚಿಸಿದ್ದಾರೆ. ಆಗಾಗ ಹೇಳುತ್ತಲೇ ಇರುತ್ತಾರೆ.

**ನಚಿಕೇತ:**—(ಭಕ್ತಿಪಾರವಶ್ಯದಿಂದ) ಭಗವಂತ! ನನ್ನ ಸಹಪಾಠಿಗಳಲ್ಲಿ ನಾನು ಅಧೋವದನದಿಂದ ನಿಲ್ಲಬೇಕಾಗಿರುವ ಈಗಿನ ಹೀನ ದೀನಾವಸ್ಥೆಯನ್ನು ಬೇಗನೆ ತೊಲಗಿಸು. (ಭಗವಂತನನ್ನು ಧ್ಯಾನಿಸುವನು) ಅಮ್ಮಾ! ತಂದೆಯು ತಪೋವನಕ್ಕೆ ಹೊರಡುವುದಾವಾಗ?

**ನಂದಿನೀದೇವಿ:**—ಈ ದಿನ ಆಚಾರ್ಯಪೂಜೆಯನ್ನು ಸ್ವೀಕರಿಸಿದ ತರುವಾಯ ಸ್ವಲ್ಪಕಾಲದಲ್ಲೇ ಹೊರಡಬೇಕೆಂದಿರಬಹುದು.

**ನಚಿಕೇತ:**—ಅಮ್ಮಾ, ಏನೆಂದೆ? ಯಾರಿಗೆ ಆಚಾರ್ಯಪೂಜೆ?

**ನಂದಿನೀದೇವಿ:**—ನಿನಗೆ ಅಷ್ಟು ಸಂತೋಷವೆ?........ಇನ್ನಾರಿಗೆ, ನಿಮ್ಮತಂದೆಗೆ ಆಚಾರ್ಯಪೂಜೆ.

**ನಚಿಕೇತ:**—ಇಲ್ಲ, ಇಲ್ಲ. ಆಚಾರ್ಯಪೂಜೆ ನಮ್ಮ ಗುರುಗಳಿಗೆ.

**ನಂದಿನೀದೇವಿ:**—(ಅಪ್ರತಿಭಳಾಗಿ ಆಶ್ಚರ್ಯದಿಂದ) ನಿಜವೆ? ನಿಜವೆ? ಅವರು ಮನೆಯಲ್ಲಿಲ್ಲವಲ್ಲ. ನೀನು ಹೇಳಿದುದು ನಿಜವೆ?

**ನಚಿಕೇತ:**—ನಿಜ.

(ತೆರೆಯು ಬೀಳುವುದು)

## ದೃಶ್ಯ ೩

[ಅಶ್ವಸೇನಮಹಾರಾಜನ ಯಜ್ಞಶಾಲೆ. ರಾಜಠೀವಿಗೆ ತಕ್ಕ ಅಲಂಕಾರ. ಅದರ ಮಧ್ಯದಲ್ಲಿ ಸುವರ್ಣರಚಿತವಾಗಿ ದೊಡ್ಡದಾದ—ಅತಿ ದೊಡ್ಡದಾದ—ಮಂದಾಸನದ ಮಾದರಿಯಲ್ಲಿ ನಿರ್ಮಿತವಾದ ಪೂಜಾಮಂಟಪ. ಅದು ರತ್ನಖಚಿತವಾಗಿರುವುದು. ಅದರ ಸ್ತಂಭಗಳ ಬೋದಿಗೆಗಳ ಮೇಲ್ಭಾಗದ ಸಿಂಹಲಲಾಟದ ಚಿತ್ರಕೆಲಸಗಳಿಂದ ಜೋಲುಬಿದ್ದಿರುವ ಮುತ್ತಿನ ಲಡಿಗಳು ತೂಗಾಡುತ್ತಿರುವುವು. ಒಂದು ಕಡೆಗೆ ಯಜ್ಞಕುಂಡವು ಶೋಭಿಸುತ್ತಿರುವುದು. ಪೂಜಾಮಂಟಪದಲ್ಲಿ ಆಚಾರ್ಯ ಪೂಜೆಗೆ ಸುವರ್ಣ ಪೀಠವು ಸಿದ್ಧವಾಗಿರುವುದು. ಅಶ್ವಸೇನ ಮಹಾರಾಜನೂ, ರಾಜಪರಿವಾರದವರೂ, ಪುರಂಧ್ರಿಯರೂ ಬ್ರಾಹ್ಮಣರೂ, ವಾಜಶ್ರವಸನೂ, ನಂದಿನೀ ದೇವಿಯೂ, ನಚಿಕೇತನೂ, ಸುಕನ್ಯೆಯೂ ಸಭೆಯಲ್ಲಿರುವರು. ಮಹಾರಾಜನೂ, ಅತನ ಪತ್ನಿಯೂ ಆಚಾರ್ಯ ಪೂಜಾಮಹೋತ್ಸವಕ್ಕೆ ತಕ್ಕ ವೇಷದಿಂದಿರುವರು. ನಚಿಕೇತನೂ, ಸುಕನ್ಯೆಯೂ, ದೇವತಾಪ್ರಾರ್ಥನೆ ಮಾಡುತ್ತಿರುವಲ್ಲಿ ತೆರೆಯು ಮೇಲಕ್ಕೆ ಹೋಗುವುದು.]

**ಅಶ್ವಸೇನಮಹಾರಾಜ:**—(ದೇವತಾಪ್ರಾರ್ಥನೆಯು ಮುಗಿದ ಮೇಲೆ) ಪೂಜ್ಯರೆ! ನಿಮ್ಮ ಪುತ್ರ ಪುತ್ರಿಯರ ಶಾರೀರವು ಬಹಳ ಮಧುರವಾಗಿದೆ. ಅವರ ಗಾನದಿಂದ ಆನಂದಿತನಾದ ನಾನು ಅವರೀರ್ವರಿಗೂ ಮೆಚ್ಚನ್ನು ಕೊಡಲು ತಾವು ಸಮ್ಮತಿಸಬೇಕು.

**ವಾಜಶ್ರವಸ:**—ಮಹಾರಾಜ! ದಾನವು ದಾತೃವಶ. ಆಶ್ರಿತರ ಭಾಗಕ್ಕೆ ನೀನು ಕಾಮಧೇನುವೇ ಆಗಿರುವೆ.

**ನಚಿಕೇತ:**—(ಸ್ವಗತ) ಇದೇನು ನಮ್ಮತಂದೆಯು ಉಪನ್ಯಸಿಸಿದ್ದು! ಉದ್ದಾಲಕ ಮಹರ್ಷಿಗಳ ವಂಶಸ್ಥರಿಗೆ ತಕ್ಕ ಮಾತುಗಳೇ ಇವು!

**ಅಶ್ವಸೇನ:**—(ತನ್ನ ಕಣ್ಸನ್ನೆಯನ್ನರಿತು ತನ್ನಬಳಿಗೆ ರತ್ನಹಾರಗಳನ್ನು ತಂದೊಪ್ಪಿಸಿದ ರಾಜಪುರುಷನಿಂದ ಅವುಗಳನ್ನು ಸ್ವೀಕರಿಸಿ

ಸುಕನ್ಯೆಯ ಕೊರಳಿಗೆ ಅವುಗಳಲ್ಲೊಂದನ್ನು ಹಾಕಿ) ಎಷ್ಟು ಇಂಪಾಗಿ ಗಾನಮಾಡಿದೆಯೇ ತಾಯಿ !

**ಸುಕನ್ಯೆ**:— (ರತ್ನಹಾರವನ್ನು ಮುಟ್ಟಿನೋಡಿಕೊಂಡು ಆನಂದವನ್ನು ಸೂಚಿಸಿ) ನೀನು ಇನ್ನೂ ಒಳ್ಳೆಯವನಾಗಿ ಇನ್ನೂ ಒಳ್ಳೆಯ ಹಾರಗಳನ್ನು ಅನೇಕರಿಗೆ ಕೊಡುವಂತೆ ದೇವರು ದಯೆ ತೋರಲಿ !

**ಅಶ್ವಸೇನ**:—ಎಂತಹ ಮಧುರವಾಣಿಗಳು ! ಮಕ್ಕಳ ಹೃದಯವೇ ಸುಧಾಭಂಡಾರ. (ಮತ್ತೊಂದು ಹಾರವನ್ನು ನಚಿಕೇತನ ಕೊರಳಿಗೆ ಹಾಕುವನು)

**ನಚಿಕೇತ**:—ಮಹಾರಾಜ ! ನಿನ್ನ ಶ್ರೇಯಸ್ಸು ವರ್ಧಿಸಲಿ ! ನಿನ್ನ ಯಶಸ್ಸು ಇತೋಽಪ್ಯಧಿಕವಾಗಿ ರಾರಾಜಿಸಲಿ ! ಆದರೆ (ಕೊರಳಿನಿಂದ ಹಾರವನ್ನು ತೆಗೆದು) ಈ ಹಾರವು ಮಾತ್ರ ನನಗೆ ಬೇಡ. ಭಗವನ್ನಾಮವಿಕ್ರಯದಿಂದ ನರಕಭಾಜನರಾಗುವ ಪಾತಕಕ್ಕೆ ನಿನ್ನಂತಹ ಮಹನೀಯರು ಯಾರನ್ನೂ ಗುರಿಮಾಡಲಾಗದು. (ಹಾರವನ್ನು ಮತ್ತೆ ಕೊಡುವನು.)

**ಸುಕನ್ಯೆ**:—ಅಣ್ಣ ಬೇಡವೆಂದ. ನನಗೂ ಬೇಡ. (ಹಾರವನ್ನು ತೆಗೆದುಕೊಡುವಳು)

**ಅಶ್ವಸೇನ**:—(ಅಪ್ರತಿಭನಾಗಿ ಹಾರಗಳನ್ನು ಯಂತ್ರದ ಬೊಂಬೆಯಂತೆ ಸ್ವೀಕರಿಸಿ, ಚಿತ್ರ ವಿಚಿತ್ರವಾಗಿ ಅದನ್ನು ಕೈಯಲ್ಲಿ ಒಂದೆರಡು ಕ್ಷಣಕಾಲ ತಿರುಗಿಸುತ್ತಿದ್ದು, ತನ್ನ ವಿಸ್ಮಯ ಪಾರವಶ್ಯವು ಸ್ವಲ್ಪ ಕಡಿಮೆಯಾದಮೇಲೆ ಸ್ವಗತ) ತಂದೆಗೂ ಮಗನಿಗೂ ಅಜಗಜಾಂತರ ವ್ಯತ್ಯಾಸ. (ಪ್ರಕಾಶ) ವಾಜಶ್ರವಸ ಮಹರ್ಷಿಗಳೆ ! ನಿಮ್ಮ ಪುತ್ರನು ಅಂದು ನೂತನ ವಟುವಾಗಿ ಆಸ್ಥಾನಕ್ಕೆ ಬಂದಾಗ ಪ್ರದರ್ಶಿಸಿದ ಮನೋವೃತ್ತಿಯನ್ನೇ ಅಚ್ಚಳಿಯದೆ ಕಾಪಾಡಿಕೊಂಡಿದ್ದಾನೆ.

**ವಾಜಶ್ರವಸ**:—ಮಹಾರಾಜ! ಆಶ್ರಿತರ ಅಪರಾಧಗಳನ್ನು ಮನ್ನಿಸುವುದು ಪ್ರಭುಧರ್ಮ. ಅಜ್ಞಾನ ಅಪರಾಧವಾದರೆ ಮತ್ತೂ ವಿಶೇಷ. (ನಚಿಕೇತನು ಸಂಕಟದಿಂದ ನಿಟ್ಟುಸಿರುಬಿಡುವನು.)

**ಅಶ್ವಸೇನ**:—(ವಾಜಶ್ರವಸನ ಕಡೆಗೆ ತಿರುಗಿ) ಮಹರ್ಷಿಗಳೆ! ಆಚಾರ್ಯ ಪೂಜೆಯ ವೇಳೆಯು ಸಮೀಪಿಸಿತಲ್ಲವೆ?

**ವಾಜಶ್ರವಸ**:—(ಸಂತೋಷವನ್ನು ತೋರ್ಪಡಿಸುತ್ತ) ಅಹುದು. ಸನ್ನಿಹಿತವಾಯಿತು. (ಸಸಂಭ್ರಮನಾಗಿ ವಿಪ್ರರ ನೆರವಿಯ ಕಡೆಗೆ ಹೋಗುವನು.)

**ವಿಪ್ರರಲ್ಲೊಬ್ಬ**:—(ತಮ್ಮ ನೆರವಿಗೆ ಮಾತ್ರವೇ ಕೇಳಿಸುವಂತೆ ಉದ್ದೇಶಿಸಿ ವಾಜಶ್ರವಸನನ್ನು ಕುರಿತು) ತಾವು ಹೇಳಿದುದು ನಿಜ. ಆಚಾರ್ಯ ಪೂಜೆಯನ್ನು ತಮಗೆ ಸಲ್ಲಿಸುವ ಉದ್ದೇಶವು ಮಹಾರಾಜನಿಗೆ ಮೊದಲಿನಿಂದಲೂ ಇದ್ದುದರಿಂದಲೇ, ಆತನು ತಮ್ಮನ್ನು ಋತ್ವಿಜರಲ್ಲೊಬ್ಬರನ್ನಾಗಿ ಆರಿಸಲಿಲ್ಲವೆಂದು ತೋರುವುದು. ತಮ್ಮ ಪುಣ್ಯವೇ ಪುಣ್ಯ.

**ವಾಜಶ್ರವಸ**:—(ಮಹತ್ತರವಾದ ಸಂತೋಷದಿಂದ) ಮಹಾರಾಜನ ಸಂತೋಷ. ತಮ್ಮೆಲ್ಲರ ಶುಭಾಶಂಸನ. (ಸಸಂಭ್ರಮನಾಗುವನು. ನಂದಿನೀದೇವಿಯು ಅದನ್ನು ಕಂಡು ಮುಖವನ್ನು ಹಿಂಡಿಕೊಳ್ಳುವಳು.)

**ವಿಪ್ರರಲ್ಲಿ ಮತ್ತೊಬ್ಬ**:—ಇನ್ನೂ ಯಾವುದೊಂದನ್ನೂ ನಿರ್ಧರವಾಗಿ ಹೇಳುವಂತಿಲ್ಲ. ನಮ್ಮ ಮಹಾರಾಜನ ಮನಸ್ಸಿನ ನಿರ್ಧರವನ್ನು ಹೀಗೆಯೇ ಸರಿಯೆಂದು ಹೇಳುವಹಾಗಿಲ್ಲ.

[ಈ ಮಾತುಗಳು ಸರಿಬೀಳದೆ ವಾಜಶ್ರವಸನು ಅವರಿಂದ ದೂರ ಸರಿದು ನಿಲ್ಲುವನು. ಏತನ್ಮಧ್ಯೆ ಮಹಾರಾಜನು ಸಂಜ್ಞೆಮಾಡಿ ರಾಜಪುರುಷನಿಂದ ಪೂಜಾ ಸಾಮಗ್ರಿಗಳ ಹರಿವಾಣವನ್ನೂ, ಹಾರ ಮುಂತಾದ ಸಾಮಗ್ರಿ

ಗಳ ಹರಿವಾಣವನ್ನೂ ತರಿಸಿ ಅವುಗಳನ್ನು ನೋಡುತ್ತಿರುವನು. ಕೊಂಬು ಕಹಳೆಗಳ ನಿನಾದವೂ, ಓಲಗಧ್ವನಿಯೂ, ಕೇಳಿಸುವುವು. ವೇದಘೋಷ ಮಾಡುವ ದ್ವಿಜೋತ್ತಮರ ಹಸ್ತಲಾಘವವನ್ನು ಸ್ವೀಕರಿಸುತ್ತ, ವಾಮದೇವ ಮಹರ್ಷಿಗಳು ಪ್ರವೇಶಿಸುವರು. ಮಹಾರಾಜನೂ ನಚಿಕೇತನೂ ಅವರಿಗೆ ನಮಸ್ಕರಿಸುವರು. ಅವರು ಪ್ರೀತಿ ಸಂತೋಷಗಳಿಂದ ವಾಜಶ್ರವಸನ ಬಳಿಗೆ ಹೋಗಿ ಅವನೊಡನೆ "ಪ್ರಿಯವಯಸ್ಯ! ಬಹುಕಾಲದ ಮೇಲೆ ಮತ್ತೆ ನಿನ್ನನ್ನು ನೋಡಿದೆನು; ಮತ್ತೆ ಸೇರೋಣ" ಎಂದು ಹೇಳುವರು. ವಾಜಶ್ರವಸನೂ ಸಂತೋಷವನ್ನು ಸೂಚಿಸಿ "ಸಂತೋಷ. ಈ ಯಜ್ಞ ಸಂರಂಭದಿಂದ ಪುನರ್ದರ್ಶನದ ಸುಯೋಗವು ಲಭಿಸಿತು." ಎಂದು ಉತ್ತರಕೊಡುವನು. ಮಹಾರಾಜನು ವಾಮದೇವ ಮಹರ್ಷಿಗಳನ್ನು ಪೂಜಾಮಂಟಪದಲ್ಲಿರುವ ಸುವರ್ಣಪೀಠದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿ ಗಳಿಂದ ಸೇವಿಸುವನು. ವಾಜಶ್ರವಸನು ಮೊದಲು ವಿಸ್ಮಿತನಾಗಿ ಆ ಬಳಿಕ ಕೋಪದಿಂದ ಕಂಪಿಸುತ್ತ ನಿಲ್ಲುವನು. ವಿಪ್ರರ ನೆರವಿಯಲ್ಲಿ ಹಲವರು ಅಪಹಾಸ್ಯವನ್ನು ಸೂಚಿಸುವ ದೃಷ್ಟಿಯಿಂದ ವಾಜಶ್ರವಸನನ್ನು ನೋಡುತ್ತ, ಅಣಕದ ಹುಸಿನಗೆಯಿಂದ ಕೂಡಿರುವರು.]

**ಅಶ್ವಸೇನ:**—(ವಾಜಶ್ರವಸನನ್ನು ಕುರಿತು) ಆಚಾರ್ಯ ಪೂಜೆಗೆ ಪ್ರಾರಂಭವಾಗಬಹುದೆ?

**ವಾಜಶ್ರವಸ:**—(ಅಸಮಾಧಾನ ಕೋಪಗಳಿಂದ) ಆಗಬಹುದು. ಮಹಾ ರಾಜನು ಕೋರಿದುದು ನಡೆಯುವುದು.

**ಅಶ್ವಸೇನ:**— ಇದೇಕೆ? ತಮ್ಮ ಮನಸ್ಸು ಉದ್ವೇಗಗೊಂಡಂತಿದೆ. ಏನು ಯೋಚನೆ?

**ವಾಜಶ್ರವಸ:**—ರಾಜರಲ್ಲಿ ನಂಬಿಕೆಯನ್ನಿಟ್ಟು ಅಪಹಾಸ್ಯಕ್ಕೆ ಗುರಿ ಯಾಗುವುದು ಅವಿವೇಕವೆಂದು.

**ಅಶ್ವಸೇನ:**—ತಮ್ಮ ಆಶಯವೇನೆಂಬುದೇ ಸ್ಪಷ್ಟವಾಗಲಿಲ್ಲ.

**ವಾಜಶ್ರವಸ:**—ಮಹಾರಾಜ! ನೀನು ಮೋಸದಿಂದ ನನ್ನನ್ನು ಈ ಬಗೆಯ ಅವಮಾನಕ್ಕೆ ಗುರಿಮಾಡುವೆಯೆಂದಿರಲಿಲ್ಲ.

**ಅಶ್ವಸೇನ:**— ನಾನು.......ಮೋಸ........ಅವಮಾನ........(ಅಪ್ರತಿಭನಾಗಿ ತಲೆಯನ್ನಾಡಿಸಿ) ಇಲ್ಲ.......ನನಗೆ ಇದೊಂದೂ ಅರ್ಥವಾಗುವುದಿಲ್ಲ.

**ವಾಜಶ್ರವಸ:**—(ರೋಷೋನ್ಮತ್ತನಾಗಿ) ಈ ಕಪಟನಾಟಕದ ಪ್ರಸಂಗವು ಬೇರೆ. ಆಗಲಿ. ಮಹಾರಾಜ! ಅರ್ಥವಾಗುವುದಿಲ್ಲವೆಂದೆ. ಅರ್ಥವಾಗುವಂತೆ ನಾನೇ ಹೇಳುತ್ತೇನೆ. ನೀನು ನನ್ನನ್ನು ಋತ್ವಿಜರಲೊಬ್ಬನನ್ನಾಗಿಯೂ ನೇಮಕಮಾಡದೆ, ಉಡುಗೊರೆಗಳ ಮೇಲೆ ಉಡುಗೊರೆಗಳನ್ನಿತ್ತು, ನನಗೆ ಆಚಾರ್ಯ ಪೂಜೆಯನ್ನು ಸಲ್ಲಿಸಬಹುದೆಂಬ ಅನುಮಾನವು ಹುಟ್ಟುವ ಸನ್ನಿವೇಶಗಳನ್ನೇ ಕಲ್ಪಿಸಿದ್ದು, ಈಗ ಈ ರೀತಿ ಮೋಸದಿಂದ ನನ್ನ ಸಹಪಾಠಿಯನ್ನೇ ಕರೆಯಿಸಿ, ಹೀಗೆ ಅವಮಾನಕ್ಕೆ ಗುರಿಪಡಿಸುವಿಯೆಂದು ನಾನು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ.

**ಅಶ್ವಸೇನ:**— ತಮಗೆ ಆಚಾರ್ಯ ಪೂಜೆಯನ್ನು ಸಲ್ಲಿಸುವುದಾಗಿ ನಾನು ಹೇಳಿದ್ದೆನೆ?

**ವಾಜಶ್ರವಸ:**—ನಾನು ರಾಜಪುರೋಹಿತ.

**ಅಶ್ವಸೇನ:**— ಅದಕ್ಕೂ ಯಜ್ಞದಲ್ಲಿಯ ಆಚಾರ್ಯಪೂಜೆಗೂ ಸಂಬಂಧವಿಲ್ಲ. ಯಜ್ಞಗಳ ಮಾತು ಹಾಗಿರಲಿ. ಶ್ರಾದ್ಧಾದಿ ಕರ್ಮಗಳಲ್ಲಿ ಕೂಡ ಅಕ್ರೋಧನರಾಗಿ, ಶೌಚಪರರಾಗಿ, ನಿರಂತರವೂ ಬ್ರಹ್ಮವಾದಿಗಳಾಗಿರತಕ್ಕವರಿಗೆ ಆಮಂತ್ರಣ ಕೊಡಬೇಕಾಗಿರುವಲ್ಲಿ ಇಷ್ಟು ದೊಡ್ಡ ಯಜ್ಞದಲ್ಲಿ ಋತ್ವಿಜರಾಗಿಯೂ ಆಚಾರ್ಯ ಪೂಜೆಗೆ ಅರ್ಹರಾಗಿಯೂ ಇರಬೇಕಾದರೆ, ಆ ಮಾತೇ ಬೇರೆ. ಸುಲಭಕೋಪಿಗಳಾದ ತಮ್ಮಂತಹವರಿಗೂ ಅದಕ್ಕೂ ದೂರ.

**ವಾಜಶ್ರವಸ**:—ಶೌಚಪರನಾಗಿಯೂ, ಬ್ರಹ್ಮವಾದಿಯಾಗಿಯೂ, ನಾನಿಲ್ಲವೆಂಬುದೋ ನಿನ್ನ ಆಶಯ ? ನಾನು ಅಕಾರಣವಾಗಿ ಕೋಪಗೊಳ್ಳುವವನೆಂಬುದೋ ನಿನ್ನ ಅಭಿಪ್ರಾಯ ?

**ಅಶ್ವಸೇನ**:—ಅಪ್ರಿಯವಾದ ಸತ್ಯವಚನಗಳನ್ನು ಮತ್ತೆ ಮತ್ತೆ ನನ್ನಿಂದ ನುಡಿಸಿ ಅಸಮಾಧಾನಪಡಬೇಕೆ ?

**ವಾಮದೇವ**:—(ಸುವರ್ಣಪೀಠದಿಂದೆದ್ದು ಬಂದು) ಮಹಾರಾಜ! ನನ್ನ ಬಾಲ್ಯಮಿತ್ರನೂ, ಸಹಪಾಠಿಯೂ, ಆದ ಈ ವಾಜಶ್ರವಸ ಮಹರ್ಷಿಗೆ ಪರಿತಾಪವುಂಟಾದುದಕ್ಕಾಗಿ ನಾನು ವಿಷಾದಿಸುವೆನು. ಸತ್ಯವನ್ನೇ ನುಡಿಯುವುದಾದರೆ, ಆತನೂ ನಾನೂ ಇಂದಿನ ಆಚಾರ್ಯಪೂಜೆಗೆ ಅರ್ಹರಲ್ಲ.

**ವಾಜಶ್ರವಸ**:-ವಾಮದೇವ ! ಅವಶ್ಯವಾಗಿ ನಿನ್ನ ವಿಚಾರವನ್ನೋ ನಿನ್ನ ಅನರ್ಹತೆಯನ್ನೋ ಹೇಳಿಕೊ. ಅನವಶ್ಯವಾಗಿ ಇತರರ ಪ್ರಸ್ತಾವವನ್ನೆತ್ತಲೂ ಬೇಡ. ಮಹರ್ಷಿಯೆಂದು ಬೇರೆ ಕರೆದು ಕುಹಕಮಾಡಲೂ ಬೇಡ.

**ಅಶ್ವಸೇನ**:—ವಾಮದೇವ ಮಹರ್ಷಿಗಳೆ ! ಜಗತ್ತೇ ತಮ್ಮನ್ನು ಹೊಗಳುತ್ತಿದೆ. ಜಗದ್ವಂದ್ಯರಾದ ತಾವೇ ಆಚಾರ್ಯ ಪೂಜೆಗೆ ಅನರ್ಹರೆಂದು ಅಪ್ಪಣೆ ಕೊಡಿಸಿದ ಮೇಲೆ ಈ ಸುವರ್ಣಪೀಠದಲ್ಲಿ ಮತ್ತಾರನ್ನು ಅರ್ಹರೆಂದು ಕುಳ್ಳಿರಿಸಲಾದೀತು ? (ರಾಜಪುರುಷನನ್ನು ಕುರಿತು) ಆಚಾರ್ಯಪೂಜೆಯ ಉಡುಗೊರೆಗಳನ್ನು ತರಿಸು. (ಮಹಾರಾಜನಿಗೆ ಮಣಿದು ಆತನು ಹೋದ ಬಳಿಕ) ಪೂಜ್ಯರೆ ಅನುಗ್ರಹಿಸಬೇಕು. ನನ್ನಲ್ಲಿ ಕೃಪೆ ತೋರಬೇಕು.

**ವಾಮದೇವ**:—ಮಹಾರಾಜ ! ಸ್ವಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಅವಕಾಶವನ್ನುಪಯೋಗಿಸಿಕೊಳ್ಳುವುದಕ್ಕಾಗಿ ಸತ್ಯವನ್ನು ಮುಚ್ಚಿಡಲಾರೆ. ವಯಸ್ಸನ್ನು ಗಮನಿಸದೆ ಯೋಗ್ಯತೆಯನ್ನೇ

ಪ್ರಧಾನವಾಗೆಣಿಸುವುದಾದರೆ, ಇಂದಿನ ಆಚಾರ್ಯ ಪೂಜೆಗೆ ಈ ಜಗತ್ತಿನಲ್ಲಿ ಅರ್ಹತೆಯನ್ನು ಪಡೆದಿರುವವನು ಒಬ್ಬನೇ. ಆ ಮಹಾ ವ್ಯಕ್ತಿಗೆ, ಆ ಮಹಾಪುರುಷನಿಗೆ, ನೀನು ಆಚಾರ್ಯ ಪೂಜೆಯನ್ನು ಸಲ್ಲಿಸುವುದಾದರೆ, ನನ್ನ ಆನಂದಕ್ಕೆ ಪಾರವೇ ಇರದು. ಮಹಾರಾಜ! ಅದರಿಂದ ನನಗೆ ನಿಜವಾಗಿಯೂ ಆನಂದವಾಗುವುದು. ಸರ್ವಸ್ವವನ್ನೂ ದಕ್ಷಿಣೆಯಾಗಿ ಒಪ್ಪಿಸುವ "ವಿಶ್ವಜಿತ್" ಯಜ್ಞ. ಈ ಮಹಾ ಯಜ್ಞದಲ್ಲಿ ನಾವು ಗಮನಿಸಬೇಕಾದುದು ಕರ್ತನ ಶ್ರೇಯಸ್ಸನ್ನು; ಕರ್ಮ ಸಾರ್ಥಕ್ಯವನ್ನು........ಸ್ವಪ್ರಯೋಜನವನ್ನಲ್ಲ.........ಸ್ವಂತ ಗೌರವವನ್ನಲ್ಲ.

**ಅಶ್ವಸೇನ:**—ಪೂಜ್ಯರೆ! ನಿಮ್ಮ ಸಾತ್ವಿಕ ಸ್ವಭಾವವನ್ನು ಕಂಡು ಮುಗ್ಧನಾಗಿದ್ದೇನೆ. ನನ್ನ ಅವಿನಯವನ್ನು ತಾವು ಮನ್ನಿಸುವುದಾದರೆ, ಒಂದು ಪ್ರಶ್ನೆಯುಂಟು. ಈ ವಿಚಾರವನ್ನು ತಾವು ಮೊದಲೇ ಸೂಚಿಸಲಿಲ್ಲವೇಕೆ?

**ವಾಸುದೇವ:**—ಆ ಮಹಾಪುರುಷನು ಇನ್ನೂ ಚಿಕ್ಕವಯಸ್ಸಿನವನು. ಆದಕಾರಣ, ಅಲ್ಪವಯಸ್ಸಿನಲ್ಲಿಯೇ ಇಷ್ಟು ದೊಡ್ಡ ಯಜ್ಞದಲ್ಲಿ ಆಚಾರ್ಯಪೂಜೆಯು ಸಲ್ಲುವುದಾದರೆ, ಅಹಂಕಾರಕೀಟವೆಲ್ಲಿ ಅರಳುವಹೂವಿಗೆ ಆಘಾತವನ್ನುಂಟುಮಾಡುವುದೋ-ಎಂದು ಸುಮ್ಮನಿದ್ದೆನು. ಮಹಾರಾಜ, ಇದನ್ನು ನಂಬುವುದಾದರೆ ನಂಬು: ಒಣಹೆಮ್ಮೆಯಿಂದ ಅಸೂಯಾಪರನಾಗಿ ಮಾತ್ರ ನಾನು ಆ ರೀತಿ ಮಾಡಲಿಲ್ಲ. ನಾನು ಮಾಡಿದುದು ತಪ್ಪೆಂಬುದು ಈಗ ತಿಳಿಯಿತು.

**ಅಶ್ವಸೇನ:**—ಶಾಂತಂ ಪಾಪಂ. ಪೂಜ್ಯರೆ! ತಮ್ಮ ಶೀಲಶುದ್ಧಿಯನ್ನು ಲೋಕವೇ ಬಲ್ಲುದು. ಆ ಮಹಾಪುರುಷನ ಸ್ವಭಾವ ವೆಂಥಹದು?

**ವಾಜಶ್ರವಸ:**—ಮಹಾರಾಜ! ಸಮಸ್ಯೆಯನ್ನು ಭೇದಿಸಲೆತ್ನಿಸು. ವಾಮದೇವನ ಕಪಟನಾಟಕಕ್ಕೆ ಬೆರಗಾಗಬೇಡ. ತನ್ನ ಮಾಹಾತ್ಮ್ಯವನ್ನು ಮೆರೆಯಿಸಿಕೊಳ್ಳುವ ಇಂತಹ ಆಗಡು ತನದ ಬಲೆಗೆ ಬೀಳಬೇಡ.

**ವಾಮದೇವ:**—ಮಹಾರಾಜ! ಆಚಾರ್ಯ ಪೂಜೆಗೆ ನಾನು ಸೂಚಿಸಿದ ಮಹಾಪುರುಷನು ಈಗಿನ ಜನ್ಮದಲ್ಲಿ ಚಿಕ್ಕವಯಸ್ಸಿನವನಾದರೂ, ಪೂರ್ವಜನ್ಮಗಳ ಪುಣ್ಯಪರಿಪಾಕದ ಸಂಸ್ಕಾರ ವಿಶೇಷವನ್ನು ಪಡೆದವನು. ಅವನ ಪ್ರತಿಭೆಪಾಂಡಿತ್ಯಗಳನ್ನು ನೋಡಿ ಅವನ ವಿದ್ಯಾಗುರುಗಳೆಲ್ಲರೂ ಅವನಲ್ಲಿ ಶಿಷ್ಯಭಾವವನ್ನು ಬಯಸುತ್ತಲಿದ್ದಾರೆ. ಆ ಮಹಾಪುರುಷನು ಜಗತ್ತಿನ ದುರ್ದಶೆಯೇ ತನ್ನ ದುರ್ದಶೆಯೆಂದೂ, ಜನತೆಯ ಕಷ್ಟವೇ ತನ್ನ ಕಷ್ಟವೆಂದೂ, ಮನಮರುಗುತ್ತಿದ್ದಾನೆ. ಹಿರಣ್ಯಗರ್ಭನ ಅನುಗ್ರಹದಿಂದ ಪ್ರಪಂಚಕ್ಕೆ ಅಖಂಡಸುಖವು ದೊರೆಯುವುದಾದರೆ, ಆನಂದದಿಂದ ಆತ್ಮಾರ್ಪಣಮಾಡಲು ಸಿದ್ಧವಾಗಿದ್ದಾನೆ.

**ಅಶ್ವಸೇನ:**—ಎಂತಹ ಸ್ವಭಾವ! ಎಂತಹ ಸದ್ಗುಣಗಳು!

**ವಾಮದೇವ:**—ಅಷ್ಟೇ ಅಲ್ಲ. ಆಸೆಯೆಂಬುದೇ ಅವನಿಗಿಲ್ಲ. ಪ್ರಾಣಿಮಾತ್ರದಲ್ಲಿ ಅವನಿಗೆ ಕರುಣೆ. ಅಪಕಾರಿಗಳನ್ನೂ ಅವನು ಪ್ರೀತಿಸುವನು. ಶಾಂತಿರಸವೇ ಮೂರ್ತಿರೂಪವಾಗಿ ಧರೆಗಿಳಿದು ಬಂದಂತೆ ತೋರುವ ಆ ಮಹಾತ್ಮನು ಲೋಕೇಶ್ವರನ ಅನುಗ್ರಹಕ್ಕೆ ಪಾತ್ರನಾಗಿ ದುರ್ಭೇದ್ಯವಾದ ಜೀವನ ಸಮಸ್ಯೆಯನ್ನು ಭೇದಿಸಿ ನಿಜದ ನೆಲೆಯನ್ನರಿತು ಜಗತ್ಕಲ್ಯಾಣವನ್ನು ಸಾಧಿಸಿ ಧನ್ಯನಾಗಬೇಕೆಂದು ತವಕಪಡುತ್ತಿದ್ದಾನೆ. ತನ್ನ ಮನಸ್ಸಿನ ಸಂಶಯಗಳಿಂದು ಕೇಳುವ ಪ್ರಶ್ನೆಗಳೇ ಅವನ ಗುರುಗಳಿಗೆ ಹೊಸದಾರಿಯ ಹೊಸಬೆಳಕನ್ನು ತೋರಿಸುತ್ತಿವೆ. ಆರ್ಯಸಂಸ್ಕೃತಿ ಲಕ್ಷಣವಾದ ದಯೆಯೂ, ದಮೆಯೂ,

ಆತನಲ್ಲಿ ಮೂರ್ತೀಭವಿಸಿರುವುದರಿಂದ, ಸುವರ್ಣ ಕಮಲಕ್ಕೆ ಪರಿಮಳವು ಬಂದಂತಿದೆ. ಆಚಾರ್ಯಪೂಜೆಗೆ ಅವನಿಗಿಂತ ಮತ್ತಾರು ಅರ್ಹರು ?

**ನಚಿಕೇತ:**—ಗುರುದೇವ ! ಆ ಪುಣ್ಯಪುರುಷನ ದರ್ಶನವನ್ನೂ ಪರಿಚಯವನ್ನು ನನಗೂ ಮಾಡಿಸಬೇಕೆಂದು ಬೇಡುವೆನು.

**ವಾಮದೇವ:**—(ಮುಗುಳುನಗೆಯಿಂದ) ಪುಣ್ಯಾತ್ಮರ ದರ್ಶನ ಪರಿಚಯಗಳು ಅಷ್ಟು ಸುಲಭ ಸಾಧ್ಯವಲ್ಲ.

**ನಚಿಕೇತ:**—ಪೂಜ್ಯರೆ! ಆ ಮಹಾನುಭಾವನ ದರ್ಶನಯೋಗ್ಯತೆಯು ಸಿದ್ಧಿಸಲೆಂದು ಆಶೀರ್ವದಿಸಬೇಕೆಂದು ಪ್ರಾರ್ಥನೆ. ಅಧಿಕಾರ ಸಿದ್ಧಿಯಾಗುವಂತೆ ಸನ್ನಿಧಾನದಿಂದ ಅನುಗ್ರಹವಾದರೆ ಸಾಕು.

**ಅಶ್ವಸೇನ:**—ಪೂಜ್ಯರೆ ! ಸಹೃದಯರೂ, ಸುಸಂಸ್ಕೃತರೂ, ತಪಸ್ವಿಗಳೂ ಆದ ತಮ್ಮ ಒಂದೊಂದು ಮಾತಿನಿಂದಲೂ ತಮ್ಮ ಘನತೆಯೂ. ಸಚ್ಚಾರಿತ್ರವೂ ವ್ಯಕ್ತವಾಗುತ್ತಿವೆ. ಆ ಮಹಾತ್ಮನಾರೆಂಬುದನ್ನು ತಿಳಿಯುವ ಕುತೂಹಲವು ನನ್ನನ್ನು ಬಾಧಿಸುತ್ತಿದೆ.

**ವಾಮದೇವ:**—ಆ ಮಹಾತ್ಮನೂ, ಆ ಪುಣ್ಯಾತ್ಮನೂ, ಮತ್ತಾರೂ ಅಲ್ಲ. ನಮ್ಮ ನಚಿಕೇತನೇ.

(ಸಭಿಕರಲ್ಲಿ ಹಲವರು ಚಕ್ಕಿತ ಬೆರಗಾಗುವರು. ಮಹಾರಾಜನು ತನ್ನ ನಿರೀಕ್ಷೆಯು ಸಫಲವಾದಂತಹ ಮನೋಭಾವವನ್ನು ವ್ಯಕ್ತಗೊಳಿಸಿ ತಲೆದೂಗುವನು. ವಾಜಶ್ರವಸನು ಆಲೋಚನಾ ಮಗ್ನನಾಗುವನು. ನಂದಿನೀದೇವಿಯು ನಿರುತ್ಸಾಹಪೂರಿತವಾಗಿ ಶ್ರಮಭರಿತವಾದ ಸಂತೋಷವನ್ನು ಸೂಚಿಸುವಳು.)

**ನಚಿಕೇತ:**—(ಅನಿರ್ವಚನೀಯವಾದ ವಿಷಾದವನ್ನು ವ್ಯಕ್ತಪಡಿಸಿ) ಗುರುದೇವ ! **ಶಿಷ್ಯಪ್ರಿಯತೆಯ ಪ್ರಭಾವದಿಂದ ಅತಿಯೋಕ್ತಿಗಳ**

ಪ್ರವಾಹವನ್ನು ಹರಿಯಿಸಿ ನನ್ನನ್ನು ಮುಳುಗಿಸಬೇಡಿ. ಈ ಅನರ್ಹಬಾಲಕನನ್ನು ಕೃಪೆಯಿಂದ ಕೈಹಿಡಿದು ಉದ್ಧಾರ ಮಾಡಿ. ಮಹಾರಾಜ! ನಾನು ಯಾರನ್ನೂ ಎಂದೂ ಯಾಚಿಸಿದವನಲ್ಲ. ಇಂದು ಮಹಾನುಭಾವನಾದ ನಿನ್ನನ್ನು ಯಾಚಿಸಿ ಪ್ರಾರ್ಥಿಸುವೆನು.

**ಅಶ್ವಸೇನ:**—(ಸಂತೋಷದಿಂದ ಬಾಲಕನನ್ನಾಲಂಗಿಸಿ) ನನ್ನ ಜೀವ ರತ್ನವೆ! ನಿನ್ನ ಯಾಚನೆಯೇನು? ಅದನ್ನು ಸಲ್ಲಿಸುವುದೇ ನನ್ನ ಜನ್ಮಸಾರ್ಥಕ್ಯ; ಪೂರ್ವಪುಣ್ಯ.

**ನಚಿಕೇತ:**—ನಮ್ಮ ಗುರುಗಳು ಜಗದ್ವಂದ್ಯರಾದರೂ, ಶಿಷ್ಯಪ್ರಿಯತೆಯೆಂಬ ಮಾಯೆಯ ಕಾವಳಕ್ಕೊಳಗಾಗಿದ್ದಾರೆ. ಅವರ ಮಾತುಗಳಿಗೆ ಮರುಳಾಗಿ ದೀನನಾದ ಈ ಅಲ್ಪನನ್ನು ವಿಷಾದದ ಮಡುವಿನಲ್ಲಿ ಮುಳುಗಿಸಬೇಡ.

**ಅಶ್ವಸೇನ:**—ಪ್ರಿಯಬಂಧುವೆ! ಪೂಜ್ಯರ ಆಣತಿಯನ್ನು ಮಿಾರಲಾರೆ; ನಿನ್ನ ಯಾಚನೆಯನ್ನು ಸಲ್ಲಿಸದಿರಲಾರೆ.

**ವಾಜಶ್ರವಸ:**—ಮಹಾರಾಜ! ಶಿಷ್ಯವರ್ಗವನ್ನುದ್ಧರಿಸುವ ನೆವದಿಂದ ಗುರುಕುಲವೆಂಬ ಆಟವನ್ನು ಹೂಡಿ, ಅವಿವೇಕಿಗಳಾದ ಸ್ತುತಿಪಾಠಕರ ದೊಡ್ಡದೊಂದು ಪಡೆಯನ್ನು ಸೃಷ್ಟಿಮಾಡಿರುವ ವಾಮದೇವನ ಕುಟಿಲೋಪಾಯಕ್ಕೆ ನಿನ್ನಂತಹ ಮೇಧಾವಿಯೂ ಬಲಿಯಾಗಿ, ನನ್ನ ಮಗನ ಮಾಹಾತ್ಮ್ಯೆಯನ್ನು ಹೊಗಳುವ ಸೋಗಿನಿಂದ ನನ್ನ ತೇಜೋವಧೆಗೆ ರಾಜಮಾರ್ಗವನ್ನು ಕಲ್ಪಿಸಿದ ಈತನ ಕುಹಕತಂತ್ರದ ಕೀಲಿನ ಬೊಂಬೆಯಾದುದು ವಿಧಿವಿಲಾಸವೇ ಸರಿ. ಪರೋತ್ಕರ್ಷವನ್ನು ಸಹಿಸಲಾರದವರ ಮರುಳಾಟವನ್ನು ಹಳಿದು ಫಲವೇನು?

**ಅಶ್ವಸೇನ:—ಪೂಜ್ಯರೆ, ಮನ್ನಿಸಿ........ಆಯಾಸಪಡಬೇಡಿ.**

**ವಾಜಶ್ರವಸ:**—(ಕೋಪದಿಂದ ಕೆರಳಿ) ಯಾವ ಯಜ್ಞದ ಯಜಮಾನನೆಂಬ ಬಿಂಕದಿಂದ ಬೀಗಿ ಪ್ರಿಯವಾದಿಗಳ ಹೊಗಳಿಕೆಯಿಂದ ಮೈಮರೆತಿರುವೆಯೋ, ಅದೇ ವಿಶ್ವಜಿದ್ಯಜ್ಞವನ್ನು ನಾನು—(ಎದೆಯನ್ನು ತಟ್ಟಿಕೊಂಡು) ಈ ವಾಜಶ್ರವಸನು—ನೆರವೇರಿಸಿ ನನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಸಮರ್ಪಿಸಿ ಜನ್ಮ ಸಾರ್ಥಕ್ಯವನ್ನು ಸಂಪಾದಿಸುವೆನು. ತನ್ಮೂಲಕ ನಿನ್ನ ಮೇಲೆ ಸೇಡನ್ನು ತೀರಿಸುವೆನು. (ಬೆರಳಿನಿಂದ ಉಂಗುರವನ್ನು ತೆಗೆದು ಕೆಳಕ್ಕೆ ಬಿಸುಟು) ರಾಜಪೌರೋಹಿತ್ಯದ ಈ ಮುದ್ರೆಯುಂಗುರವನ್ನು ಇನ್ನು ಮುಂದೆ ಯಾವ ನಾಯಿಗಾದರೂ ಕೊಟ್ಟುಕೊ. ಇಂದೇ ನಿನ್ನ ರಾಜಧಾನಿಯನ್ನು ಬಿಟ್ಟು, ನನ್ನ ಆಶ್ರಮಕ್ಕೆ ತೆರಳುವೆನು. (ಕೋಪಿಸಿಕೊಂಡು ಹೊರಡುವನು)

**ವಾಮದೇವ:**—(ಪ್ರೀತ್ಯಾದರಗಳಿಂದ ಆತನ ಕೈಹಿಡಿದು) ಇದು ನಿನಗೆ ಯುಕ್ತವಲ್ಲ. ಕರ್ಮಸಾದ್ಗುಣ್ಯಾರ್ಥವಾಗಿ, ಕರ್ಮಸಾಫಲ್ಯಕ್ಕಾಗಿ, ಹಾಗೆ ಹೇಳಿದೆನು. ನಿನ್ನ ಪುತ್ರನ ಯೋಗ್ಯತೆಯನ್ನು ನೀನರಿಯೆ. ನಚಿಕೇತನು ನಿಮ್ಮವಂಶದ ಮಹರ್ಷಿಗಳೆಲ್ಲರ ತಪಃಫಲದ ಮಂದಾರಪುಷ್ಪ.

**ವಾಜಶ್ರವಸ:**—ಅವನು ನಾಶವಾಗಲಿ. (ನಂದಿನೀದೇವಿಯು ಬೆಚ್ಚಿ ಬೆದರುವಳು) ತಂದೆಯ ತೇಜೋವಧೆಯನ್ನು ಸ್ಮರಿಸಿಕೊಂಡು ಸುಮ್ಮನಿರುವ ಪರಸ್ತುತಿಪಾಠಕನಾದ ಮಗನು ಮೃತ್ಯುಸಮಾನ. ಪಿತೃದ್ರೋಹಿಯಾದ ಕುಲಘಾತಕ. ವಿವೇಕ ವಿವೇಚನೆಗಳಿಂದ ಶೂನ್ಯವಾಗಿ ಸ್ಮಶಾನ ಸದೃಶವಾಗಿರುವ ಈ ಸಭೆಯಲ್ಲಿ ನಾನು ನಿಲ್ಲಲಾರೆ.

**ನಚಿಕೇತ:**—(ದುರ್ಭರವಾದ ಶೋಕಸಂತಾಪಗಳಿಂದ, ಸ್ವಗತ) ದೇವ! ನಮ್ಮ ತಂದೆಗೆ ವಿವೇಕ ಭಿಕ್ಷವನ್ನಿತ್ತು ಸಲಹು. ಕೃಪಾಜಲಧಿಯಲ್ಲವೇ ನೀನು! (ತಂದೆಗೆ ನಮಸ್ಕರಿಸಿ, ಪ್ರಕಾಶ) ತಂದೆಯೆ! ನಾನು ಯಾವ ಅಪರಾಧಮಾಡಿದ್ದರೂ ಮನ್ನಿಸು.

(ವಾಜಶ್ರವಸನು ಅವನನ್ನು ತಳ್ಳಿ ಹೊರಟುಹೋಗುವನು. ನಂದಿನೀ ದೇವಿಯೂ ಎಳೆದೆಳೆದು ಹೆಜ್ಜೆಗಳನ್ನಿಡುತ್ತ, ಹೋಗುವಳು. ವಾಮ ದೇವನು ನಚಿಕೇತನನ್ನು ಪ್ಯೈದಡವುವನು. ಗಾನಮಾಡಿಕೊಂಡು ನಾರದರು ಪ್ರವೇಶಿಸುವರು)

**ಅಶ್ವಸೇನ:**—(ನಾರದರಿಗೆ ನಮಸ್ಕರಿಸಿ, ವಾಮದೇವನೇ ಮುಂತಾದ ವರೂ ನಮಸ್ಕರಿಸಿದ ಬಳಿಕ) ಪೂಜ್ಯರೆ! ಸಕಾಲಕ್ಕೇ ದಯ ಮಾಡಿಸಿದಿರಿ. ನಮಗೊಂದು ದೊಡ್ಡ ಸಮಸ್ಯೆಯು ಒದಗಿದೆ. ಸರ್ವಜ್ಞರಾದ ತಾವೇ ದಾರಿತೋರಿ ನಮ್ಮನ್ನು ಪಾರಗಣಿಸ ಬೇಕು. ಸಂತೋಷ ಸಂರಂಭವು ಹೀಗೆ ವಿಷಾದಪೂರಿತ ವಾಗಿ ಮನೋವೇದನೆಗೆ ಕಾರಣವಾಯಿತೆಂದು ತಲ್ಲಣಿಸು ತ್ತಿದ್ದೇನೆ.

**ನಚಿಕೇತ:**—ಪೂಜ್ಯರೆ! ಪಾಮರನಾದ ನನ್ನನ್ನು ಧರ್ಮಸಂಕಟ ದಿಂದ ಪಾರುಮಾಡಿ ಉದ್ಧರಿಸಿ. ನಮ್ಮ ಗುರುಗಳು ಆಚಾರ್ಯ ಪೂಜೆಯನ್ನು ಸ್ವೀಕರಿಸುವಂತೆ ಉಪದೇಶಿಸಿ. ಅಶ್ವಸೇನ ಮಹಾರಾಜನಂತಹ ಸಾತ್ವಿಕತಾರೆಗಳು ಹೆಚ್ಚುವಂತೆ ವರ ವನ್ನು ಕರುಣಿಸಿ. ಮೋಕ್ಷಭೂಯಿಷ್ಟವಾಗಿ ಸ್ವರ್ಗ್ಯವೆನಿ ಸಿರುವ ಅಗ್ನಿವಿದ್ಯೆಯನ್ನು ಸಾಧಿಸಿ, ದೇಹಾತಿರಿಕ್ತ ವಸ್ತುವಿನ ನಿಜಸ್ವಭಾವವನ್ನರಿತು ಧನ್ಯನಾಗುವ ಭಾಗ್ಯವನ್ನು ಅಂಜಲಿ ಬದ್ಧನಾದ ಈ ಬಾಲಕನಿಗೆ ಅನುಗ್ರಹಿಸಿ ಕಾಪಾಡಿ. ಪೂಜ್ಯರೆ! ನನ್ನ ಹೃದಯವೇ ಕಲಕಿಹೋಗಿದೆ.

**ನಾರದ:**—(ಮಂದಸ್ಮಿತ ವದನನಾಗಿ) ನೀನು!........ಮರ್ತ್ಯರಾಗಿದ್ದು ಅಮರರಾದವರಲ್ಲಿ ಯಮಧರ್ಮರಾಜನೊಬ್ಬನಿಗೆ ಮಾತ್ರವೇ ತಿಳಿದಿರುವ ವಿರಾಡಾತ್ಮತ್ವವನ್ನು ಕೊಡುವ ಅಗ್ನಿವಿದ್ಯೆ!........ ನೀನು, ನೀನು, ನೀನು, ಅದನ್ನು ಸಾಧಿಸಬೇಕೆ?........ಅಬ್ಬ! ಎಂತಹ ಆಶೆ! (ಎಷ್ಟು ಚಿಕ್ಕ ಹುಡುಗನಿಗೆ ಎಂತಹ ಆಶೆ!)

**ವಾಮದೇವ:**---ಪೂಜ್ಯರೆ! ಆ ವಿದ್ಯೆಯು ಯಾರಿಗೆ ತಿಳಿದಿದೆಯೆಂದು ಪದೇ ಪದೇ ನಚಿಕೇತನು ನನ್ನನ್ನು ಕೇಳುತ್ತಿದ್ದ. ಆದರೆ ನನ್ನಲ್ಲಿ ಉತ್ತರವಿಲ್ಲ. ತನಗೆ ತಿಳಿಸಲು ನನಗೆ ಇಷ್ಟವಿಲ್ಲ ವೆಂದೂ, ತಾನು ಹೆಚ್ಚಿನ ಅರ್ಹತೆಯನ್ನು ಪಡೆದು ಗುರುವಾದ ನನ್ನನ್ನು ಮೆಚ್ಚಿಸಿ ತಿಳಿಯಬೇಕೆಂದೂ ಭಾವಿಸಿ ಸುಮ್ಮನಾಗು ತ್ತಿದ್ದ. ಆ ಅಗ್ನಿವಿದ್ಯೆಯು ಯಮಧರ್ಮರಾಜನಿಗೆ ತಿಳಿ ದಿದೆಯೆ? (ಮರ್ತ್ಯರಿಗೆ ಅಸಾಧ್ಯವೆಂಬ ನಿರಾಶೆಯಿಂದ) ಸರಿ. ಸರಿ.

**ನಚಿಕೇತ:**—(ಆ ಮಾತುಗಳೇ ಕೇಳಿಸದವನಂತೆ, ಅನಿರ್ವಚನೀಯವಾ ದೊಂದು ಏಕಾಗ್ರ್ಯಭಾವದ ಗುರಿಯಿಂದ ಅಂತರಿಕ್ಷದ ಕಡೆಗೆ ನೋಡುತ್ತ ದೇಹದಮೇಲಣ ಪರಿಜ್ಞಾನವೇ ಇಲ್ಲದವನಂತೆ ಒಂದೆರಡು ಹೆಜ್ಜೆಗಳನ್ನು ಹಿಂದಕ್ಕಿಟ್ಟು ಬಿಗುವೇರಿ ಸೆಡೆದು ನಿಂತವನಾಗಿ,) ಇಂದಿನಿಂದ ಯಮನು ನನ್ನ ಆರಾಧ್ಯ ದೈವ. ಗಗನಸದೃಶ ನೀಲರಾಜಿ ನಿಬಿಡೀಕೃತ ಸುಂದರವದನ ಸಂಶೋಭಿತ ಯಮ ಧರ್ಮರಾಜ! ನೀಲೋತ್ಪಲಾಮಲದಳ ಸುಕೋಮಲ ಕರುಣ ಹೃದಯ ಸೂರ್ಯಪುತ್ರ! ಕರುಣಾರಸಪರಿಪೂರಿತವಾದ ನಿನ್ನ ಅಪಾಂಗಪ್ರಭೆಯೇ ಇಂದಿನಿಂದ ನನ್ನ ಹೃದಯದ ತನಿಬೆಳ ಕಾಗಿ, ತೇಜೋಮಯವಾದ ನಿನ್ನ ಶ್ರೀಮೂರ್ತಿಯ ಮಂಗಳ ವಿಗ್ರಹವೇ ನನ್ನ ಮನಸ್ಸಿನಲ್ಲಿ ನಿರಂತರವೂ ನೆಲಸಿರುವಂತೆ ಅನುಗ್ರಹಿಸಿ ಮಾರ್ಗದರ್ಶಿಯಾಗು.

(ಪ್ರಾರ್ಥನಾಮಗ್ನನಾಗುವನು.)

**ನಾರದ:**—(ಅಶ್ವಸೇನ ಮಹಾರಾಜನನ್ನು ಕುರಿತು) ನೋಡು, ನೋಡು, ಮಹಾರಾಜ! ಭೂದೇವಿಯ ಸಿರಿಮುಡಿಯ ಸುರಗಿಯ ಹೂವಿ ನಂತಿರುವ ಈ ಭಕ್ತಿಪುಷ್ಪದ ಸಾಕಾರ ರೂಪವನ್ನು ನೋಡು. ವೈಕುಂಠನಾಥನ ಸುದರ್ಶನ ಚಕ್ರದ ದೀಧಿತಿಮಾಲೆಯೇ ಮನುಷ್ಯಾಕೃತಿಯಿಂದ ಧರೆಗಿಳಿದು ಬಂದಂತಿರುವ ಈ ತೇಜೋ

ರಾಶಿಯನ್ನು ನೋಡಿ ನೋಡಿ ಆನಂದಿಸು. ಭಕ್ತಿಸೀಮಂತಿನಿಯ ಚೂಡಾರತ್ನವೆನಿಸಿ, ಅನುಸಂಧಾನದ ಭಾವಸಮಾಧಿಯಲ್ಲಿ ಬಾಹ್ಯಪ್ರಪಂಚದ ಪರಿಜ್ಞಾನವೇ ಇಲ್ಲದೆ ಓಲಾಡುತ್ತಿರುವ ಯೋಗ ಸಂಪತ್ತಿಯುಳ್ಳ ಈತನನ್ನು ನೋಡು. ಆರ್ಯಾವರ್ತದ ಭಾಗ್ಯಪಜ್ಜಿಯ ಕೊಳಲೀ ನಚಿಕೇತನು. ದೇವನು ನುಡಿಸುವ ಈ ಕೊಳಲಿನ ರಾಗಸುಧೆಯಿಂದ ಮುಂದೆ ಲಭಿಸುವ ಪಾರಮಾರ್ಥಿಕ ವಿಭವಕ್ಕೆ ನೀನು ಹೂಡಿದ ಯಜ್ಞಸಮಾರಂಭವೇ ಹೇತುಭೂತವಾಗಿ ಪರಿಣಮಿಸುವುದರಿಂದ ನೀನೇ ಧನ್ಯನು. ಆದರೆ, ಆದರೆ,............

**ಅಶ್ವಸೇನ:**—ಪೂಜ್ಯರೆ ! ........ತಿಳಿಸಿ ಕೃಪೆಮಾಡಬೇಕು.

**ನಾರದ:**—ಜ್ಞಾನಜ್ಯೋತಿಯನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿ ಅವನು ಅನುಭವಿಸಬೇಕಾಗುವ ಹಿಂಸೆಗಳೂ, ತನ್ನ ಅಜ್ಞಾನದ ಫಲವಾಗಿ ಅವನ ತಂದೆಯು ಅನುಭವಿಸಬೇಕಾಗುವ ದುಃಖವೂ, ಅತಿದಾರುಣವಾಗಿರುತ್ತವೆ. (ವಾಮದೇವನು ದುಃಖಕಾತರನಾಗುವನು.)

**ಅಶ್ವಸೇನ:**—ಮುಂದೇನು ಗತಿ ?

**ನಾರದ:**—ವಿಧಿನಿಯಮವನ್ನು ಮೀರಬಲ್ಲವರಾರು ?...........ಅದು ಹಾಗಿರಲಿ. ಧನ್ಯರಾದ ಈ ಗುರುಶಿಷ್ಯರಿಬ್ಬರಿಗೂ ಆಚಾರ್ಯ ಪೂಜೆಯನ್ನು ಸಲ್ಲಿಸು........ನಚಿಕೇತನು ಭಾವ ಸಮಾಧಿಯಿಂದ ಬಾಹ್ಯ ಪ್ರಪಂಚಕ್ಕೆ ಬಂದಮೇಲೆ ಹಾಗೆ ಮಾಡು ಇನ್ನು ನಾನು ಹೊರಡುವೆನು. (ನಚಿಕೇತನ ಹೊರತು ಉಳಿದವರು ನಮಿಸುವರು. ನಾರದರು ಹೋಗುವರು.)

**ಅಶ್ವಸೇನ:**—ಕೃತಾರ್ಥನಾದೆನು.

(ತೆರೆಯು ಬೀಳುವುದು.)

---

# ದೃಶ್ಯ ೪

[ವಾಜಶ್ರವಸನ ಆಶ್ರಮಕ್ಕೆ ಸ್ವಲ್ಪ ಸಮೀಪದಲ್ಲಿರುವ ಕಾಡು. ಕೆಲವು ಸಮಿತ್ತುಗಳನ್ನು ಕೈಯಲ್ಲಿ ಹಿಡಿದು ವಾಜಶ್ರವಸನೂ ನಂದಿನೀ ದೇವಿಯೂ ಪ್ರವೇಶಿಸುವರು.]

**ನಂದಿನೀದೇವಿ:**—ಇಷ್ಟು ಹುಡುಕಿದರೂ ಸಮಿತ್ತುಗಳು ದೊರೆಯುವುದೇ ಕಷ್ಟವಾಗಿದೆ.

**ವಾಜಶ್ರವಸ:**—ನಿಜ, ನಾವು ನೆರವೇರಿಸಿದುದು ವಿಶ್ವಜಿತ್....ಅಂತಹ ಯಜ್ಞ. ಎಲ್ಲೆಲ್ಲಿ ಎಷ್ಟೆಷ್ಟು ಸಮಿತ್ತುಗಳಿದ್ದುವೋ ಅವೆಲ್ಲ ಮುಗಿದುಹೋದುವು. ಯಜ್ಞದ ಅಂಗವಾದ ಇಷ್ಟಿಯು ಇಂದು ನೆರವೇರಬೇಕು. ಈ ದಿನವೇ ಸಂಗ್ರಹಿಸಿದ ಸಮಿತ್ತು ಮುಂತಾದವುಗಳೇ ಅದಕ್ಕೆ ಬೇಕು. ಈ ದಿನ ಸಂಗ್ರಹಿಸಿದವನ್ನೇ ಉಪಯೋಗಿಸಬೇಕೆಂಬ ನಿಯಮದಿಂದ ಹೀಗೆ ಕಷ್ಟವಾಗಿದೆ.

**ನಂದಿನೀದೇವಿ:**—ಅಷ್ಟು ದೊಡ್ಡ ಯಜ್ಞವನ್ನೇ ನೆರವೇರಿಸಿದ ಬಳಿಕ ಉಳಿದಿರುವ ಇಷ್ಟಿಯೊಂದನ್ನು ಮಾಡುವಲ್ಲಿ ಕಷ್ಟವನ್ನೆಣಿಸಿದವರುಂಟೆ?

**ವಾಜಶ್ರವಸ:**—ಸಮಿತ್ತುಗಳು ದುರ್ಲಭವಾಗಿರುವುದರಿಂದ ಹಾಗೆ ಹೇಳಿದೆನು. ಕಷ್ಟವನ್ನೆಣಿಸುತ್ತ ಕುಳಿತರೆ ಕರ್ಮವು ಸಾಂಗವಾದೀತೆ? ಅದಿರಲಿ. ಅಶ್ವಸೇನಮಹಾರಾಜನು ತಾನೇ ಈ ಯಜ್ಞವನ್ನು ಮಾಡಿದವನೆಂದು ಬಿಂಕಪಡುವ ಸೊಕ್ಕನ್ನಿಳಿಸಿದಂತಾಯಿತು.

**ನಂದಿನೀದೇವಿ:**—ಹೀಗೆ ಸ್ಪರ್ಧೆಯಿಂದ ಯಜ್ಞಮಾಡಬಹುದೋ ಬಾರದೋ ತಿಳಿಯದು. ಅದು ಹೋಗಲಿ. ಆತನು ನೆರವೇರಿಸಿದ ಯಜ್ಞದಲ್ಲಿ ಆಚಾರ್ಯಪೂಜೆಯನ್ನು ವಾಮದೇವ

ರೊಡನೆ ಸ್ವೀಕರಿಸಿದ ನಮ್ಮ ನಚಿಕೇತನೇ ಈ ಯಜ್ಞದಲ್ಲಿ ನಿಮ್ಮ ಊಳಿಗದವನಾಗಿದ್ದಾನಲ್ಲ...........(ಹುಸಿನಗೆಯಿಂದ) ಅವನಲ್ಲಿಯೂ ಆಗ್ರಹಗೊಂಡಿದ್ದಿರಿ.

**ವಾಜಶ್ರವಸ:**—(ಸ್ವಲ್ಪ ನಕ್ಕು, ಸೋಲನ್ನೊಪ್ಪಿಕೊಳ್ಳದ ಹುಸಿ ಉತ್ಸಾಹದಿಂದ) ನಾನು ಆ ರೀತಿ ಮಾಡಿದುದರಿಂದಲೇ ಅವನು ವಿಧೇಯನಾಗಿರುವುದು. ನನಗೆ ಅವನಲ್ಲಿ ಪ್ರೀತಿಯಿಲ್ಲವೆ? ಕುಲೋದ್ಧಾರಕನಾದ ಸತ್ಪುತ್ರ. ಅವನಲ್ಲಿ ನನಗೆ ಬಹಳ ಪ್ರೀತಿಯಿದೆ, ನಂದಿನಿ.

**ನಂದಿನೀದೇವಿ:**—(ನಗುತ್ತ) ನಿಮಗೆ ಅವನಲ್ಲಿ ಪ್ರೀತಿಯಿದೆ ಆದರೆ ಅವನ ಸ್ವಭಾವವು ತಿಳಿಯದು. ಹೋಗಲಿ. ವಾಮದೇವ ಮಹರ್ಷಿಗಳು ಬರಲು ಅನುಕೂಲವಿಲ್ಲದಿದ್ದರೂ, ಅವರ ಪ್ರಿಯಶಿಷ್ಯ ನಚಿಕೇತನನ್ನು ಕಳುಹಿಸಿದರಲ್ಲ!

**ವಾಜಶ್ರವಸ:**—(ನೇಪಥ್ಯದಕಡೆಗೆ ತೋರಿಸಿ) ಅದೋ! ದೂರದಲ್ಲಿರುವ ಆ ತೋಪಿನಿಂದಾಚೆಗಿರುವ ಪುರದಬಳಿಯಲ್ಲಾದರೂ ಸಮಿತ್ತು ದರ್ಭೆಗಳು ದೊರೆಯುವುವೋ—ಎಂದು ನೋಡಿ ಬರುವೆನು. ನೀನು ಇಲ್ಲಿಯೇ ಇರು. (ಹೋಗುವನು)

(ಸುಕನ್ಯೆಯು ಪುಷ್ಪಾಲಂಕೃತೆಯಾಗಿ ಹಾಡುತ್ತ ಪ್ರವೇಶಿಸುವಳು. ನಚಿಕೇತನು ಅವಳನ್ನು ನೋಡಿ ನೋಡಿ ಹಿಗ್ಗುತ್ತ, ಹಿಂದೆ ಬರುವನು)

**ನಚಿಕೇತ:**—ಸುಕನ್ಯೆ ವನಲಕ್ಷ್ಮಿಯಂತಿದ್ದಾಳೆ, ನೋಡಮ್ಮ.

**ಸುಕನ್ಯೆ:**—ಇದೆಲ್ಲಾ ಅಣ್ಣ ಮಾಡಿದ ಅಲಂಕಾರವಮ್ಮ. (ನಚಿಕೇತನ ಕೆನ್ನೆಯನ್ನು ಸವರಿ) ಎಂಥ ಅಣ್ಣನೋ ನಮ್ಮಣ್ಣ! ಅಮ್ಮ, ಹಿಂದೆ ಮಹಾರಾಜನು ಕೊಟ್ಟ ರತ್ನಾಭರಣಗಳಿಗಿಂತ ನನ್ನ ಮನಸ್ಸಿಗೆ ಅಣ್ಣನು ಮಾಡಿರುವ ಈ ಪುಷ್ಪಾಲಂಕಾರವೇ ಸೊಗಸಾಗಿದೆಯಮ್ಮ.

(ನಂದಿನೀದೇವಿಯು ಸಂತೋಷಿಸುವಳು)

**ನಚಿಕೇತ:**—ಮಹಾರಾಜನ ಮೇಲಣ ಸ್ಪರ್ಧೆಯಿಂದಲೂ, ಸ್ವರ್ಗ ಸುಖದ ಆಸೆಯಿಂದಲೂ ತಂದೆಯು ಯಜ್ಞಮಾಡಿ ಸದ್ಗತಿಗೆ ದೂರನಾಗುವುದನ್ನು ನಾನು ಸ್ವೀಕರಿಸಲಾರೆನು. ಅದನ್ನು ನೋಡಿ ನನಗೆ ಬಹುಸಂಕಟವಮ್ಮಾ. ಸುಕನ್ಯೆಯನ್ನು ಅಲಂಕರಿಸುವ ನೆವದಿಂದಲಾದರೂ, ಅವಳು ಪ್ರೀತಿಯಿಂದ ಕೂಡಿ ನಗುವಿನ ಲಹರಿಯನ್ನೆಬ್ಬಿಸುವಾಗ ಅವಳ ನಗುವಿನ ಬೆಳದಿಂಗಳನ್ನು ನೋಡುವ ಸಂತೋಷದಿಂದಲಾದರೂ, ಆ ಸಂಕಟವನ್ನು ಮರೆಯುವ ಯತ್ನಮಾಡಿದೆ. ಸಾಧ್ಯವಾಗಲಿಲ್ಲ. ಯಜ್ಞಕ್ಕೆ ಮಹರ್ಷಿಗಳಾರೂ ಬರಲಿಲ್ಲ. ನಮ್ಮ ಗುರುಗಳೂ ಯಜ್ಞಕ್ಕೆ ಬರಲಿಲ್ಲ.

**ನಂದಿನೀದೇವಿ:**— ಈ ವಿಚಾರವನ್ನೆಲ್ಲ ನಿನ್ನೆಯೇ ನಾನು ನಿನಗೆ ತಿಳಿಸಿದ್ದೇನೆ. ಮತ್ತೆ ಈ ಸುದ್ದಿಯು ಬೇಡ, ನಚಿಕೇತ!

**ನಚಿಕೇತ:**—ನಿನ್ನೆ ನೀನು ಹೇಳಿದ ಧರ್ಮಸೂಕ್ಷ್ಮಗಳನ್ನು ಕಂಡು ನಾನು ವಿಸ್ಮಿತನಾದೆ. ಅವುಗಳೆಲ್ಲ ನಿನಗೆ ತೋರಿದ ಬಗೆ ಹೇಗಮ್ಮ?

**ನಂದಿನೀದೇವಿ:**—(ಪ್ರೀತ್ಯಾದರಗಳಿಂದ ಬೆನ್ನನ್ನು ಸವರಿ) ನಿಮ್ಮ ತಂದೆಯನ್ನು ಸಂತೋಷಪಡಿಸುವುದಿಲ್ಲವೆ, ನಚಿಕೇತ?

**ನಚಿಕೇತ:**—ನಿನ್ನ ಮಗನಾಗಿ ಹುಟ್ಟಿದವನೊಡನೆ ಈ ಮಾತೇ ನಮ್ಮ? ಜನ್ಮಜನ್ಮಕ್ಕೂ ನೀನೇ ಮಾತೆಯಾಗಬೇಕೆಂದು ಬಯಸುತ್ತಿರುವವನೊಡನೆ ಈ ಸಂಶಯದ ಮಾತೇನಮ್ಮ?

**ಸುಕನ್ಯೆ:**—ಅಣ್ಣಾ! ನಾನು ಮಾತ್ರ ನಿನ್ನ ತಂಗಿಯಾಗಿ ಹುಟ್ಟ ಬೇಡವೇನೊ! ನಾನು ತಂದೆಯ ಬಳಿಗೆ ಹೋಗುವೆನು (ಹೋಗುವಳು.)

**ನಂದಿನೀದೇವಿ:**—ಕಂದ, ನಚಿಕೇತ, ನಿನ್ನೆ ಹೇಗೂ ಹೇಳಿದೆಯಲ್ಲವೆ? ಸಮಸ್ತ ಪ್ರಾಣಿಗಳನ್ನೂ ಸಂತೋಷಪಡಿಸುವುದೇ ಶ್ರೇಷ್ಠವಾದ

ಯಜ್ಞವೆಂದು. ಸಾತ್ವಿಕ ಜೀವನವೇ ಶ್ರೇಷ್ಠವಾದ ಯಜ್ಞವೆಂದು ಹೇಳಿದೆಯಲ್ಲವೆ? ನೀನೆಲ್ಲಿ ಅಪ್ರಿಯವಾದ ಸತ್ಯವನ್ನಾಡಿ ಅವರಿಗೆ ಅಸಮಾಧಾನವನ್ನುಂಟುಮಾಡುವೆಯೋ ಎಂದು ನನಗೆ ಕಳವಳ. ವಾಮದೇವ ಮಹರ್ಷಿಗಳ ಶಿಷ್ಯರೆಲ್ಲರೂ ಸತ್ಯಪ್ರಿಯರೆಂಬುದನ್ನು ನಾನು ಬಲ್ಲೆ. ಆದರೂ, ನೀನು ಸುಮ್ಮನಿದ್ದರೆ ಎಲ್ಲವೂ ಶಾಂತರೀತಿಯಲ್ಲಿ ನಡೆದು ಹೋಗುವುದು.

**ನಚಿಕೇತ:**--ಧರ್ಮಸೂಕ್ಷ್ಮದ ವಿಚಾರವನ್ನೆತ್ತಿ ಹಿಂದೊಂದುದಿನ ನೀನೇ ಹೇಳಿದ್ದೆಯಲ್ಲಮ್ಮ, ರಾಗದ್ವೇಷಾದಿಗಳು ರಜೋಗುಣದ ಅಂಗಗಳೆಂದು; ಅವುಗಳು ಅಳಿದು ಹೋಗಿ ಶುದ್ಧ ಸಾತ್ವಿಕತೆಯೇ ಉಳಿಯುವವರೆಗೂ ಆತ್ಮಾನುಸಂಧಾನದ ಅನಂತ ವೈಭವವು ದೊರೆಯದೆಂದು. ಅದೇ ಮಾತುಗಳನ್ನು ಈ ಯಜ್ಞಕ್ಕೂ ಅನ್ವಯಿಸಬಹುದಲ್ಲವೆ? ತಂದೆಯ ಶ್ರೇಯಸ್ಸನ್ನು ಹೇಗೆ ಉಪೇಕ್ಷಿಸಲಮ್ಮ? ನನ್ನ ಹೃದಯವೇ ದುಃಖದಿಂದ ಬೇಯುತ್ತಿದೆ. ಯಾರಿಗೂ ಪ್ರಯೋಜನವಿಲ್ಲದ ಗೋವುಗಳನ್ನು ದಾನಮಾಡಿ ಫಲವೇನಮ್ಮ? ದಾನಕ್ಕಾಗಿ ಅವುಗಳನ್ನು ಸಿದ್ಧಪಡಿಸಿರುವುದನ್ನು ಕಂಡು ನನಗೆ ಬಹುಸಂಕಟ. ತಂದೆಯ ಶ್ರೇಯಸ್ಸಿಗಾಗಿ ನಾನು ಸಾಯುವುದೂ ನನಗೆ ಸುಖಕರ. ಈಗ ತಂದೆಯು ದಾನಮಾಡಬೇಕೆಂದಿರುವಂತಹ ಗೋವುಗಳನ್ನು ದಾನಮಾಡಿದರೆ ಅನಂದವೆಂಬ ನರಕವಂತಮ್ಮ!

**ನಂದಿನೀದೇವಿ:**—(ನಿಟ್ಟುಸಿರುಬಿಟ್ಟು ಮೌನವಾಗಿ ನಿಂತಿರುವಳು.)

**ನಚಿಕೇತ:**—ಮೌನವೇಕೆ?...............ನೀನು ನಿಟ್ಟುಸಿರುಬಿಟ್ಟರೆ ನನ್ನ ಪ್ರಾಣವೇ ಹತ್ತಿಬರುವಷ್ಟು ಸಂಕಟವಮ್ಮ. ಮನಸ್ಸಿಗೆ ವ್ಯಥೆಯೆ?...........ಯೋಚಿಸುವೆನು...........ಅನವಶ್ಯವಾಗಿ ಒಂದು ಮಾತನ್ನೂ ಆಡದೆ ಮೌನದಿಂದಿರಲು ಪ್ರಯತ್ನಿಸುವೆನು.........ಸರಿಯೆ?........ಮಾತನಾಡಮ್ಮ.

**ನಂದಿನೀದೇವಿ:**—ನನ್ನ ಆಶೆಯೆಲ್ಲಾ ನಿನ್ನನ್ನೇ ಸೇರಿದೆ. ನಚಿಕೇತ! ನಿನ್ನಿಂದಲೇ ಪಿತೃಗಳು ಆನಂದಿಸಬೇಕು. ಕುಲವು ಉದ್ಧಾರವಾಗಬೇಕು. ನಿನ್ನ ದುಃಖವು ನನಗೆ ಗೊತ್ತಿದೆ. ಆದರೆ...........

**ವಾಜಶ್ರವಸ:**— (ಸುಕನ್ಯೆಯೊಡಗೂಡಿ ಪ್ರವೇಶಿಸಿ) ನೀವೆಲ್ಲರೂ ಆಶ್ರಮಕ್ಕೆ ನಡೆಯಿರಿ. ಸಮಿತ್ತು ಮುಂತಾದವುಗಳನ್ನು ಋತ್ವಿಕ್ಕುಗಳು ತರುವರಂತೆ. ಅವರಿಗೆ ಆಯಾಸವಾದರೂ ನಮಗೆ ಪರಮೋಪಕಾರವಾಯಿತು. ನಚಿಕೇತ! ಅವರು ಅವುಗಳನ್ನು ತೆಗೆದುಕೊಂಡು ನದಿಗೆ ಸ್ನಾನಕ್ಕಾಗಿ ಬರುವರು. ಅವರು ಆಶ್ರಮಕ್ಕೆ ಹೊರಟೊಡನೆಯೇ ನೀನು ಅವರ ನಾರು ಮಡಿಗಳನ್ನೊಗೆದು, ಮಡಿಯುಟ್ಟು ಸಮಿತ್ತು ಮುಂತಾದವುಗಳೊಡನೆ ಆಶ್ರಮಕ್ಕೆ, ಬಾ. ಅವುಗಳನ್ನು ಜೋಪಾನವಾಗಿ ತೆಗೆದುಕೊಂಡು ಬಾ. (ಪತ್ನಿಯನ್ನು ಕುರಿತು) ಇಷ್ಟಿಗೆ ಎಲ್ಲವನ್ನೂ ಅಣಿಮಾಡು. (ಅವರು ಮೂವರೂ ಹೋದಮೇಲೆ ನಾರದರು ಗಾನಮಾಡುತ್ತ ಪ್ರವೇಶಿಸಿದುದನ್ನು ಕಂಡು) ನಾರದ ಮಹರ್ಷಿಗಳಿಗೆ ವಂದಿಸುವೆನು.

**ನಾರದ:**—(ಆಶೀರ್ವಾದವನ್ನು ಅಭಯಹಸ್ತದಿಂದ ಸೂಚಿಸಿ) ವಾಜಶ್ರವಸ ಮಹರ್ಷಿಗಳೆ! ರಾಜಧಾನಿಯಿಂದ ಆಶ್ರಮಕ್ಕೆ ಹಿಂದಿರುಗಿದ ಮೇಲೆ ಯಜ್ಞವನ್ನೂ ಮಾಡಿದಿರಿ.

**ವಾಜಶ್ರವಸ:**—ಅಶ್ವಸೇನಮಹಾರಾಜನು ತಾನೊಬ್ಬನೇ ವಿಶ್ವಜಿದ್ಯಜ್ಞಮಾಡಿದುದಾಗಿ ಇನ್ನು ಸ್ವಪ್ರತಿಷ್ಠೆಯಿಂದ ಬೀಗುವಂತಿಲ್ಲ. ಅದಕ್ಕೆ ಅವಕಾಶವು ತಪ್ಪಿತು. ನನಗೆ ಸ್ವರ್ಗಲೋಕದ ಸುಖಾವಾಸವು ದೊರೆಯಲು ಕಾರಣವಾಯಿತು. ನಾರದ ಮಹರ್ಷಿಗಳೆ! ಇದೇನು! ಒಣಗಿಹೋದ ಬಿದಿರಿನ ತುಂಡನ್ನು ಕೈಯಲ್ಲಿ ಹಿಡಿದಿರುವಿರಿ.

**ನಾರದ:**—ಒಬ್ಬ ರಾಜಕನ್ಯೆಯು ವೇಣುಗಾನಮಾಡುತ್ತಿದ್ದಳು. ನನಗೂ ಕೊಳಲನ್ನೂದುವುದನ್ನು ಕಲಿಯಲು ಆಶೆಯಾಯಿತು. ಆ ವೇಳೆಗೆ ಸರಿಯಾಗಿ ಈ ಮುರುಕುಬಿದಿರಿನ ತುಂಡೂ ಸಿಕ್ಕಿತು. ಇದನ್ನು ನೆಟ್ಟು, ಇದು ಬಿದಿರುಮೆಳೆಯಾದಮೇಲೆ ಒಳ್ಳೆಯ ಕೊಳಲನ್ನು ಮಾಡಿಸಿ, ವೇಣುಗಾನವನ್ನು ಕಲಿತು, ಆಕೆಯೆದುರಿಗೆ ಹೋಗಿ ಕೊಳಲೂದಬೇಕೆಂಬ ಆಕಾಂಕ್ಷೆ.

**ವಾಜಶ್ರವಸ:**—(ನಕ್ಕು) ಇದೇನು ವಿನೋದ, ನಾರದರೆ? ನಿಮ್ಮಂತಹವರೂ ಹೀಗೆ ಹೇಳಬಹುದೆ? ಬಿದಿರು ಒಣಗಿಹೋಗಿದೆ. ಮೊಳೆತು ಗಿಡವಾಗಲು ಅದರಲ್ಲಿ ರಸವೇ ಇಲ್ಲವಲ್ಲ?

**ನಾರದ:**—(ವ್ಯಂಗ್ಯವಾಗಿ) ಹಾಗೇನು?........ಫಲಾಕಾಂಕ್ಷಾರಹಿತವಾದ ಭಗವದರ್ಪಣವೇ ಯಜ್ಞಾದಿ ಸತ್ಕರ್ಮಗಳ ಜೀವರಸ. ದೇವಋಣನಿವೃತ್ತಿಯೇ ಯಜ್ಞಗಳ ಜೀವರಸ. ಆ ಜೀವರಸದ ಸೋಂಕೇ ಇಲ್ಲದ ನಿಮ್ಮ ಯಜ್ಞದಿಂದಲೇ ಸತ್ಫಲವು ಬರಬಹುದಂತೆ. ಈ ಬಿದಿರು ಒಣಗಿಹೋಗಿದ್ದ ಮಾತ್ರವೇ ಇದರಿಂದ ಗಿಡವಾಗಲಾರದೆ?....ಆಗಲಾರದೆ?....ಆಗಬಾರದೇನು?

**ವಾಜಶ್ರವಸ:**—ನಾರದರೆ! ಈ ಅಣಕದ ಮಾತುಗಳು ಇನ್ನು ಸಾಕು. ನಾನು ಯಜ್ಞದೀಕ್ಷೆಯನ್ನು ವಹಿಸಿದುದನ್ನು ಕಂಡು ಸೈರಿಸಲಾರದೆ, ಆ ಅಶ್ವಸೇನನು ನನ್ನನ್ನು ನಿಂದಿಸಹೇಳಿ ತಮ್ಮನ್ನು ಇಲ್ಲಿಗೆ ಕಳುಹಿಸಿರಬಹುದು. ತಾವು ವೃಥಾ ಆಯಾಸಪಟ್ಟಿರಿ. ಹೊರಡಿ.

**ನಾರದ:**—ಕಾಮಕ್ರೋಧಾದಿಗಳನ್ನು ಜಯಿಸಲಾರದ ನಿಮಗೆ

ದೊಡ್ಡದೊಂದು ಅನರ್ಥವು ಸಂಭವಿಸುವುದರಲ್ಲಿದೆ. ಹೇಳಿದ್ದೇನೆ. ಈಗಲೇ ಎಚ್ಚೆತ್ತುಕೊಳ್ಳಿ.

**ವಾಜಶ್ರವಸ:**—ತಾವು ಹೊರಡಿ. (ನಾರದರು ಹೋಗುವರು. ವಾಜಶ್ರವಸನು ಅವರು ಹೋದಕಡೆಗೇ ದುರದುರನೆ ನೋಡುತಿದ್ದು ತಾನೂ ಹೋಗುವನು.)

## ದೃಶ್ಯ ೫

[ವಾಜಶ್ರವಸನ ಯಜ್ಞಶಾಲೆ. ಋತ್ವಿಕ್ಕುಗಳು ಅಗ್ನಿಯನ್ನು ಪುಟಮಾಡಿ ಹೋಮಮಾಡುತ್ತಿರುವರು. ನೇಪಥ್ಯದಲ್ಲಿ ಓಲಗವಾಗುತ್ತಿರುವುದು. ವಾಜಶ್ರವಸನೂ, ನಂದಿನೀದೇವಿಯೂ ದೀಕ್ಷಾಬದ್ಧರಾಗಿ ಕುಳಿತಿರುವರು.]

**ವಾಜಶ್ರವಸ:**— ಕಾಲವು ಮೀರುತ್ತ ಬಂದಿತು. ನಚಿಕೇತನು ಸಮಿತ್ತು ಮುಂತಾದವುಗಳನ್ನು ತೆಗೆದುಕೊಂಡು ಇನ್ನೂ ಬರಲಿಲ್ಲವಲ್ಲಾ. ಅವನೊಬ್ಬ ಮತಿಗೇಡಿ.

**ಸುಕನ್ಯೆ:**—(ಭ್ರಾಂತಳಾಗಿ ಓಡಿಬಂದು) ಅಣ್ಣಾ, ಅಣ್ಣಾ, ಹೊಳೆಯಲ್ಲಿ ಮುಳುಗಿಹೋಗುತ್ತಿದ್ದ. ಉಳಿದು ಬಂದ. ಕೊಚ್ಚಿಹೋಗುತ್ತಿದ್ದ ಜಿಂಕೆಯ ಮರಿಯೊಂದನ್ನು ಉಳಿಸಲು ಹೋಗಿ ತಾನೇ ಕೊಚ್ಚಿಹೋಗುತ್ತಿದ್ದ. ಬರುತ್ತಿದ್ದಾನೆ.

**ನಚಿಕೇತ:**—(ಪ್ರವೇಶಿಸಿ, ತನ್ನ ಕೈಯಲ್ಲಿರುವ ಜಿಂಕೆಯ ಮರಿಯನ್ನು ಎದೆಗೆ ಮೃದುವಾಗಿ ಅಪ್ಪಿಕೊಂಡು ಅದರ ತಲೆಯನ್ನು ಸವರಿ) ಯಮಧರ್ಮರಾಜ! ನೀನೆಷ್ಟು ಕೃಪಾಮಯನಾಗಿರುವೆ! ದೇವ! ಈ ಪುಟ್ಟಮರಿಗೆ ನೀನು ಈ ದಿನ ಜೀವದಾನಮಾಡಿದೆ. ಮರಿಯೆ! ಮರಿಯೆ! ಈ ದಿನ ನಿನ್ನ ಭಾಗಕ್ಕೆ ಪ್ರಪಂಚವೇ ಮುಳುಗಿ ಹೋಗುತ್ತಿದ್ದಿತಲ್ಲವೆ? ತಂದೆಯೆ! ಈ ಮರಿಯನ್ನು ನೋಡು. ಇನ್ನೂ ಭಯದಿಂದ ನಡುಗುತ್ತಿದೆ. ಪಾಪ! ಪುಟ್ಟಮರಿ. ಅದರ ತಾಯಿಯ ಬಳಿಗೆ ಹೋಗಲಿ. (ಬಿಡುವನು.)

**ವಾಜಶ್ರವಸ:**—ಸಮಿತ್ತುಗಳೆಲ್ಲಿ? ನನಗೊಂದು ಜಿಂಕೆಯ ಮರಿಯನ್ನು ತಂದುತೋರಿಸೆಂದು ನಾನು ಹೇಳಿರಲಿಲ್ಲ.

**ನಚಿಕೇತ:**—ತಂದೆಯೆ! ಅಕಸ್ಮಾತ್ತಾಗಿ ಹುಚ್ಚು ಪ್ರವಾಹವು ಬಂದಿತು. ಈ ಮರಿಯನ್ನುಳಿಸುವುದು ಅತಿ ಕಷ್ಟವಾಯಿತು.

ಅದು ಬದುಕಿರುವುದರಿಂದ ನಾನೂ ಉಳಿದಿದ್ದೇನೆ. ಇಲ್ಲವಾದರೆ ನಾವಿಬ್ಬರೂ ಸಮುದ್ರಕ್ಕೇ ಹೋಗುತ್ತಿದ್ದೆವು.

**ಸುಕನ್ಯೆ**:—ಅಣ್ಣ! ನೀನು ಮೇಲಕ್ಕೆ ಬರದೇ ಹೋಗಿದ್ದರೆ, ನಾನು ಹೊಳೆಗೆ ಬಿದ್ದು ನಿನ್ನನ್ನು ದಡಕ್ಕೆ ತರಬೇಕೆಂದಿದ್ದೆ. ಸಿದ್ಧವಾಗಿದ್ದೆ.

**ವಾಜಶ್ರವಸ**:—(ಅಸಹ್ಯತೆಯ ವೇದನೆಯಿಂದ) ಸಮಿತ್ತು ಮುಂತಾದವೆಲ್ಲಿ, ನಚಿಕೇತ? ಗೋದಾನವಾಗಬೇಕು. ಹೋಮವಾಗಬೇಕು.

**ನಚಿಕೇತ**:—ಅಕಸ್ಮಾತ್ತಾಗಿ ಪ್ರವಾಹಬಂದಿತು. ಆಗ ನೀರಿನ ಹೊಡೆತದಲ್ಲಿ ಸಮಿತ್ತು ಮುಂತಾದವೂ, ನಾನು ಒಗೆದಿಟ್ಟಿದ್ದ ನಾರುಮಡಿಗಳೂ ಕೊಚ್ಚಿಹೋದುವು. ನಾನು ಆ ಜಿಂಕೆಯ ಮರಿಯನ್ನುಳಿಸಲು ಪ್ರಯತ್ನಿಸಿದೆ.

**ವಾಜಶ್ರವಸ**:—(ಕೋಪದಿಂದ) ನೀಗಿದೆಯಾ ನನ್ನ ಯಜ್ಞಫಲವನ್ನು? ಚಂಡಾಲ! ಸಮಿತ್ತಿಗಿಂತ ಹಾಳು ಜಿಂಕೆಯ ಮರಿಯೇ ನಿನಗೆ ಹೆಚ್ಚಾಯಿತು! ಅಲ್ಲವೆ?

**ನಚಿಕೇತ**:—ತಂದೆಯೆ, ಕ್ಷಮಿಸಬೇಕೆಂದು ಬೇಡುವೆನು. ಜಿಂಕೆಯ ಮರಿಯ ಮರಣವು ಸಂಭವಿಸಿದ್ದರೆ, ಹೋದ ಪ್ರಾಣವು ಹಿಂತಿರುಗುತ್ತಿರಲಿಲ್ಲ. ನಾನು ಜೀವಂತನಾಗಿ ಆಶ್ರಮಕ್ಕೆ ಬರುತ್ತಿರಲಿಲ್ಲ. ನನ್ನ ಮನಸ್ಸೆಲ್ಲ ಅದರಲ್ಲಿಯೇ ಇದ್ದಿತು.

**ವಾಜಶ್ರವಸ**:—ಮೂರ್ಖ! ಚಂಡಾಲ! ನಿನ್ನ ಅಧಿಕ ಪ್ರಸಂಗಿತನವನ್ನು ನಿಲ್ಲಿಸು. ಕರ್ಮಲೋಪಕ್ಕೆ ಹೊಣೆಯಾರು?

(**ವಾಜಶ್ರವಸನು ರೋಷವನ್ನು ಸಹಿಸಲಾರದೆ ನಚಿಕೇತನನ್ನು ಪ್ರಹರಿಸಲು ರಭಸದಿಂದ ಏಳುವ ಪ್ರಯತ್ನಮಾಡುವನು. ಋತ್ವಿಜರು**

ತಡೆದು ಕುಳ್ಳಿರಿಸಿ "ಇಷ್ಟಿದೀಕ್ಷೆ. ಮುಗಿಯುವವರೆಗೂ ಯಜಮಾನನೂ, ಬ್ರಹ್ಮತ್ವವನ್ನು ವಹಿಸಿರುವವರೂ ಏಳಕೂಡದು," ಎನ್ನುವರು.)

**ವಾಜಶ್ರವಸ:**—ಚಂಡಾಲ! ದ್ರೋಹಿ! ನೀನು ಯಮನಪಾಲಾಗು.

**ಋತ್ವಿಜರಲ್ಲೊಬ್ಬ:**—ಶಾಂತರಾಗಿ. ಪ್ರಾಯಶ್ಚಿತ್ತದಿಂದ ಕರ್ಮವನ್ನು ಮುಗಿಸಿ ಬೇರೆ ಸಮಿತ್ತುಗಳನ್ನೇ ಉಪಯೋಗಿಸೋಣ. ಮೊದಲು ಗೋದಾನವಾಗಲಿ. ಸಂಕಲ್ಪಮಾಡಿ. (ವಾಜಶ್ರವಸನು ಸಂಕಲ್ಪಮಾಡುವನು)

**ನಂದಿನೀದೇವಿ:**—ನಚಿಕೇತ! ದಾನಕೊಡುವ ಅನುಕ್ರಮದಲ್ಲಿ ಗೋವುಗಳನ್ನು ಕಟ್ಟಿರುವೆಯಾ?

**ವಾಜಶ್ರವಸ:**—ಪೂಜ್ಯರುಗಳೆ! ಸಂಕಲ್ಪವಾಯಿತು. (ನಚಿಕೇತನನ್ನು ಕುರಿತು) ನೀಚ! ಗೋದಾನಕ್ಕೆ ಗೋವುಗಳನ್ನು ಕಟ್ಟಿರುವ ಕ್ರಮವನ್ನು ಬೊಗಳು. ಅನುಕ್ರಮವು ಸರಿಯಾಗಿದೆಯೋ ಇಲ್ಲವೋ ನೋಡುವೆನು.

**ಋತ್ವಿಜರಲ್ಲೊಬ್ಬ:**—ನಿಮ್ಮ ಪುತ್ರನು ಅಶ್ವಸೇನ ಮಹಾರಾಜನು ನೆರವೇರಿಸಿದ ಯಜ್ಞದಲ್ಲಿ ಆಚಾರ್ಯ ಪೂಜೆಯನ್ನು ಪಡೆದವನು. ವಾಮದೇವ ಮಹರ್ಷಿಗಳ ಪ್ರಿಯಶಿಷ್ಯ. ಅವನನ್ನು ನಿಂದಿಸಬೇಡಿ.

**ವಾಜಶ್ರವಸ:**—ವಾಮದೇವನ ಗೊಡ್ಡು ಹೊಗಳಿಕೆಯಿಂದಲೇ ಈ ಹಗರಣ. ಇದರ ಮೇಲೆ ಅದು ಕ್ಷತ್ರಿಯನು ಮಾಡಿದ ಯಜ್ಞ. ಅದೆಲ್ಲಿ? ಈ ಯಜ್ಞವೆಲ್ಲಿ?

**ನಚಿಕೇತ:**—ತಂದೆಯೆ, ಮನ್ನಿಸು. ಅನೇಕ ಬ್ರಾಹ್ಮಣರೂ ಕ್ಷತ್ರಿಯರು ಕೆಲವರಿಂದ ಬ್ರಹ್ಮವಿದ್ಯೆಯ ಉಪದೇಶವನ್ನು ಹೊಂದಿ ಕೃತಾರ್ಥರಾಗಿದ್ದಾರಂತೆ. ಗುಣಗಳೇ ಪೂಜಾಸ್ಥಾನವಂತೆ.

ಜಾತಿಕುಲಗಳಲ್ಲವಂತೆ. ನಮ್ಮ ಗುರುಗಳು ಉಪದೇಶಿಸಿರುವುದನ್ನು ಭಕ್ತಿಯಿಂದ ಶ್ರುತಪಡಿಸಿದೆ. ಅಪರಾಧವಾಗಿದ್ದರೆ ಮನ್ನಿಸಬೇಕೆಂದು ಬೇಡುವೆನು.

**ವಾಜಶ್ರವಸ:**--ಅವಿಧೇಯನಾದ ಅಪ್ರಯೋಜಕ! ಇನ್ನು ನಿನ್ನನ್ನು ಆ ಹಾಳು ಗುರುಕುಲಕ್ಕೆ ಕಳುಹಿಸುವುದಿಲ್ಲ. ಗೋವುಗಳನ್ನು ಕಟ್ಟಿರುವ ಕ್ರಮವನ್ನು ಬೊಗಳು.

**ನಚಿಕೇತ:**—ಆಜ್ಞೆ. (ನೇಪಥ್ಯದ ಕಡೆಗೆ ಕೈತೋರಿಸಿ) ಅದೋ! ಮುಪ್ಪಡಸಿ ದೇಹವೇ ಮುರಿದು ಬೀಳುವಂತಿರುವ ಆ ಹಸು. ಅದು ಮೊದಲು ದಾನವಾಗಿ ಅರ್ಪಿತವಾಗಬೇಕೆಂಬುದು ನಿನ್ನ ಆಜ್ಞೆ. ಹುಲ್ಲನ್ನು ತಿನ್ನುವುದಕ್ಕೂ ಉಸಿರಿಲ್ಲದ ಆ ಹಸು, ಅದು ಎರಡನೆಯದು. ತಂದೆಯೆ! ಇವುಗಳಿಗೆ ಬದಲಾಗಿ ನನ್ನನ್ನು ದಾನಮಾಡಬೇಕೆಂದು ಬೇಡುವೆನು. ನನ್ನನ್ನು ಯಾರಿಗೆ ದಾನವಾಗಿ ಕೊಡುವೆ? ಅದೋ! ಹಾಲುಕೊಟ್ಟುದು ತೀರಿಹೋಗಿ ಇನ್ನು ಈಯಲಾರದ ಆ ಹಸು. ಅದು ಮೂರನೆಯದು. ತಂದೆಯೆ! ಅದೂ ಬೇಡ. (ದೈನ್ಯಸ್ವರದಿಂದ) ನನ್ನನ್ನು ದಾನಮಾಡು. ನಿನ್ನ ಶ್ರೇಯಸ್ಸೊಂದೇ ನನಗೆ ಬೇಕು. ನನ್ನನ್ನು ಯಾರಿಗೆ ದಕ್ಷಿಣೆಗಾಗಿ ದಾನಮಾಡುವೆ?

**ನಂದಿನೀದೇವಿ:**—(ಯಾತನೆಯ ಕಾತರ ಸ್ವರದಿಂದ) ನಚಿಕೇತ! ನಚಿಕೇತ!

**ಸುಕನ್ಯೆ:**—(ನಗುತ್ತ) ಒಳ್ಳೆಯ ಹಸುಗಳು! ಒಳ್ಳೆಯದಾನ! ಮಹಾರಾಜನ ಯಜ್ಞದ ಅಟ್ಟಹಾಸ ಹೇಗಿದ್ದಿತು! (ನಗುವಳು. **ವಾಜಶ್ರವಸನು ಅತಿಕೋಪದಿಂದಲೂ, ಅತ್ಯಂತ ಲಜ್ಜೆಯಿಂದಲೂ, ಅಪ್ರತಿಭನಾಗಿರುವನು. ಅವನ ಕೈಗಳೂ, ತುಟಿಗಳೂ ನಡುಗುತ್ತಿರುವುವು. ಕಣ್ಣುಗಳು ಕಿಡಿಯನ್ನು ಕಾರುವಂತೆ ಭ್ರುಕುಟೀಬದ್ಧವಾಗಿರುವುವು.**)

**ನಂದಿನೀದೇವಿ:**—(ದರ್ಪದಿಂದ) ಸುಕನ್ಯೆ! ಸುಮ್ಮನಿರು.

**ನಚಿಕೇತ:**—(ನೇಪಥ್ಯದಕಡೆಗೆ ಕೈತೋರಿಸಿ) ಅದೋ! ನಿರಿಂದ್ರಿಯಗಳಾಗಿರುವ ಆ ಗೋವುಗಳು. ಅವು ಆಮೇಲೆ ದಾನವಾಗಬೇಕು. (ಅತ್ಯಂತ ದೈನ್ಯಭಾವದಿಂದ) ತಂದೆಯೆ, ತಂದೆಯೆ, ಈ ಗೋವುಗಳನ್ನು ದಾನಮಾಡಬೇಡ. ನನ್ನನ್ನು ದಾನಮಾಡು. ನಾನು ದಾಸನಾಗುವೆನು. ದಾನಮಾಡು. ನನ್ನನ್ನು ಯಾರಿಗೆ ಕೊಡುವೆ? ನನ್ನನ್ನು ಯಾರಿಗೆ ಕೊಡುವೆ?

**ವಾಜಶ್ರವಸ:**—(ರೋಷವು ತಾನೇ ತಾನಾಗಿ ಹೊರಹೊಮ್ಮುತ್ತಿರುವಲ್ಲಿ) (ಭೀಷಣಸ್ವರದಿಂದ) ಮೃತ್ಯವೇ ತ್ವಾ ದದಾಮಿ. ಮೃತ್ಯವೇ ತ್ವಾ ದದಾಮಿ. ಮೃತ್ಯವೇ ತ್ವಾ ದದಾಮಿ. (ಜಲಧಾರೆಯನ್ನು ಬಿಟ್ಟು) ಇದೋ ದಾನಧಾರೆ! ನಿನ್ನನ್ನು ಮೃತ್ಯುವಿಗೆ ದಾನ ಮಾಡಿದ್ದೇನೆ. ಯಮನಿಗೆ—ಕಾಲಯಮನಿಗೆ ನಿನ್ನನ್ನು ದಾನ ಮಾಡಿದ್ದೇನೆ.

**ನಚಿಕೇತ:**—ಯಮನು ನನ್ನ ಆರಾಧ್ಯದೈವ. ನಾನು ಧನ್ಯನಾದೆನು. ತಾಯಿತಂದೆಗಳ ಶ್ರೇಯಸ್ಸಿಗಾಗಿ ಸಾವೂ ನನಗೆ ಸುಖಕರ.

**ವಾಜಶ್ರವಸ:**-ನೀಚ! ಅದಕ್ಕೂ ಉತ್ತರ ಹೇಳುವಿಯಾ? ನೀನು ನಾಶವಾಗು. ಯಮನಿಗೆ ಕೊಟ್ಟಿದ್ದೇನೆ, ನಿನ್ನನ್ನು.

(ಸಿಡಿಲಿನಂತೆ ಧ್ವನಿಯಾಗುವುದು. ಮೇಘಪಙ್ಕ್ತಿಯು ಕೆಳಗೆ ಕುಣಿಕೆಯಿಂದಲೂ, ವಿವಿಧ ವರ್ಣಗಳಿಂದಲೂ ಕೂಡಿ, ಪ್ರಭಾವಾಲೆಯನ್ನೆರಚುತ್ತಿರುವ ಯಮಪಾಶವು ದೇದೀಪ್ಯಮಾನವಾಗಿ ಬಂದು ನಿಲ್ಲುವುದು. ನಚಿಕೇತನ ಹೊರತು ಉಳಿದವರೆಲ್ಲರೂ ವಿಸ್ಮಯದಿಂದ ಸ್ತಬ್ಧರಾಗುವರು.)

**ನಚಿಕೇತ:**—(ಯಮಪಾಶಕ್ಕೆ ನಮಸ್ಕರಿಸಿ) ನೀನು ಯಾವ ದಿವ್ಯ ಪುರುಷನ ಆಯುಧವೋ, ನೀನು ಬಂದುದೆತ್ತಲಿಂದಲೋ,

ಹೋಗುವುದೆಲ್ಲಿಗೋ ತಿಳಿಯದೆ ಇದೆ. ನಿನ್ನ ಒಡೆಯನಾದರೂ ಅನುಗ್ರಹಿಸಬಾರದೆ! ಅವನ ಮಹಿಮೆಯಿಂದಲಾದರೂ ನನಗೆ ತಿಳಿಯಬಾರದೆ?

(" ತೇಜಸ್ವಿಯಾದ ವಟುವೆ! ಇದು ಯಮಪಾಶ. ನಿನ್ನನ್ನು ಯಮಲೋಕಕ್ಕೆ ಕರೆದೊಯ್ಯಲು ಬಂದಿದೆ." ಎಂದು ಅಶರೀರ ವಾಣಿಯಾಗುವುದು)

**ವಾಜಶ್ರವಸ:**—(ಭಯವಿಷಾದ ವಿಹ್ವಲನಾಗಿ) ಅಯ್ಯೋ! ರೋಷೋನ್ಮತ್ತನಾಗಿ, ವಿವೇಚನೆಯನ್ನೇ ಕಳೆದುಕೊಂಡು ನಾನು ಎಂತಹ ಹೀನಕಾರ್ಯಮಾಡಿದೆ! ಇದು ಯಮಪಾಶವಂತೆ!

**ನಚಿಕೇತ:**–(ಆನಂದ ದೈನ್ಯಗಳಿಂದ ಪ್ರೇಮರಿತು ಯಮಪಾಶಕ್ಕೆ ಮೂರು ಸಲ ಪ್ರದಕ್ಷಿಣೆ ಮಾಡಿ ಸಾಷ್ಟಾಂಗ ನಮಸ್ಕಾರಮಾಡಿ) ಯಮ ಧರ್ಮರಾಜ! ಇದು ನಿನ್ನ ಪಾಶವಂತೆ. ನನ್ನನ್ನು ನಿನ್ನಲ್ಲಿಗೆ ಕರೆದೊಯ್ಯಲು ಬಂದಿದೆಯಂತೆ! ಎಂತಹ ಅಮೋಘವಾದ ಉಪಕಾರ! ಪ್ರಭೋ! ಈ ದೀನನಲ್ಲಿ ಎಷ್ಟು ದಯೆತೋರಿರುವೆ! ಮೃತನಾದ ಮೇಲಾದರೂ ನಿನ್ನನ್ನು ಬೇಡಿ ಅಗ್ನಿವಿದ್ಯೆಯನ್ನು ಕಲಿಯಬೇಕೆಂಬ ನನ್ನ ಹಗಲು ಕನಸುಗಳು ನಾನು ಸಜೀವನಾಗಿರುವಾಗಲೇ ಸಾರ್ಥಕವಾಗಿ ನಿಜದ ನೆಲೆಯನ್ನರಿಯುವ ಸುಯೋಗ (ಆನಂದ ಕೋಲಾಹಲದಿಂದ) ಯಮ ಧರ್ಮರಾಜ! ಯಮಧರ್ಮರಾಜ!

(ಈರ್ವರು ಯಮದೂತರು ವಿಮಾನದಲ್ಲಿ ಬಂದು ಭೂಮಿಗಿಳಿಯುವರು.)

**ಮೊದಲನೆಯವನು:**—ಸಾಧಕಶ್ರೇಷ್ಠನಾದ ವಟುವೆ! ವಿಮಾನವನ್ನೇರು. ನಮ್ಮ ಪ್ರಭುವಾದ ಯಮಧರ್ಮರಾಜನಲ್ಲಿಗೆ ಬಿಜಯಮಾಡು.

**ಎರಡನೆಯವನು:**—ಯಮಪಾಶವು ನಮ್ಮನ್ನು ಹಿಂಬಾಲಿಸುತ್ತ ನಮಗೆ ಬೆಂಬಲವಾಗಿ ಕಾಪಾಡುವುದು.

**ನಚಿಕೇತ :**— ಆಯುಃಪರಿಮಿತಿಯು ಪೂರ್ಣವಾಗದವರು ಯಮ ಲೋಕಕ್ಕೆ ಬರಲು ಅವಕಾಶವುಂಟೆ ?

**ಮೊದಲನೆಯ ಯಮದೂತ:**—ತೇಜಸ್ವಿಯೆ ! ನಿನ್ನ ಮನಸ್ಸಿಗೂ ಮಾಯೆಯ ಮರೆಯೆ ? ನೀನು ದಾನವಾಗಿ ಯಮಧರ್ಮರಾಜ ನಿಗೆ ಸಮರ್ಪಿತವಾಗಿರುವೆ. ಆತನ ಸ್ವತ್ತು ಆತನ ಲೋಕ ದಲ್ಲಿರಲು ಅಭ್ಯಂತರವೇನಿದೆ ? ಈ ದಾನದಿಂದ ನಿಮ್ಮ ತಂದೆಯು ಪುಣ್ಯರಾಶಿಯನ್ನೇ ಗಳಿಸಿದಂತಾಯಿತು.

**ನಚಿಕೇತ:**—(ಭಕ್ತಿಯಿಂದ ಕೈಮುಗಿದು) ಧನ್ಯನಾದೆನು. (ಆನಂದ ದಿಂದ) ಈ ದಾನದಿಂದ ತಂದೆಗೆ ಪುಣ್ಯರಾಶಿ... ನಾನು....ಪೂಜ್ಯ ಯಮಧರ್ಮರಾಜನ ಸ್ವತ್ತು....ಎಂತಹ ಅಮೃತಯೋಗ!. .. ಅನರ್ಹನಾದ ನನಗೂ ಎಂತಹ ಅಲಭ್ಯಲಾಭ !

**ಎರಡನೆಯ ಯಮದೂತ:**—ಇನ್ನು ಹೊರಡೋಣ.

**ನಚಿಕೇತ:**—ಪೂಜ್ಯನಾದ ತಂದೆಯೆ ! ಅನುಜ್ಞೆಯನ್ನು ಕೊಟ್ಟು ಉದ್ಧರಿಸು. (**ಸಂದಿನೀದೇವಿಯು ಮೂರ್ಛಿತೆಯಾಗುವಳು. ಋತ್ವಿ ಜರು ಶೈತ್ಯೋಪಚಾರಮಾಡುತ್ತಿರುವರು. ಸುಕನ್ಯೆಯು " ಅಮ್ಮಾ, ಅಮ್ಮಾ," ಎಂದು ತಾಯಿಯಬಳಿಗೆ ಬಂದು ಕುಳಿತು ರೋದಿಸು ವಳು.**)

**ವಾಜಶ್ರವಸ:**—(ಓಡಿಬಂದು ಮಗನನ್ನಪ್ಪಿ) ನಚಿಕೇತ ! ನನ್ನಪ್ಪ ! ನಮ್ಮಕುಲದ ಬಾಲಪ್ರವಾಳ ! ಎಲ್ಲಿಗೆ ಹೋಗುವೆ ? ಅಯ್ಯೋ, ನಾನೆಂತಹ ಕೆಲಸಮಾಡಿದೆ ! ಅವಿಧೇಯನೆಂದು ನಿನ್ನನ್ನು ಶಪಿಸಿದರೂ, ಆಗಾಗ ಕೋಪಪರವಶನಾಗಿ ನಿನ್ನ ವಿಷಯದಲ್ಲಿ ಕ್ರೂರನಾಗಿ ವರ್ತಿಸಿದರೂ, ನಿನ್ನನ್ನು ನೋಡಿ ನೋಡಿ ನಲಿಯುತ್ತಿದ್ದೆ. ಮಹಾರಾಜನು ಮಾಡಿದ ಯಜ್ಞದಲ್ಲಿ ಆಚಾರ್ಯಪೂಜೆಯನ್ನು ಸ್ವೀಕರಿಸಿದವನು ನಮ್ಮ ಯಜ್ಞದಲ್ಲಿ ಋತ್ವಿಜರ ಊಳಿಗದವನೆಂದು ಹೆಮ್ಮೆಪಡುತ್ತಿದ್ದೆ. (**ರೋದಿಸಿ**)

ಇದು ನಾನುಮಾಡಿದ ಯಜ್ಞವಲ್ಲ. ಇದು ನಮ್ಮ ಯಜ್ಞ ಅಯ್ಯೋ! ನಮ್ಮೆಲ್ಲರ ಯಜ್ಞ............ನಾನೇ ಯಜ್ಞಪಶು.

**ನಚಿಕೇತ:**—ತಂದೆಯೆ! ಸಮಾಧಾನಹೊಂದು. ಪೂಜ್ಯನೆ! ಗೋವುಗಳನ್ನು ದಾನಮಾಡಬೇಡವೆಂದು ನಿನ್ನನ್ನು ಪ್ರಾರ್ಥಿಸಿದಾಗ ನಾನು ಅಪ್ರಿಯಪನ್ನಾಡಿದ್ದರೂ, ಸಂಕಟದಿಂದ ಆಡಿದ್ದೇನೆ. ನನಗೆ ಪೂಜ್ಯನಾದ ನಿನಗೆ ಅನಂದವೆಂಬ ನರಕಬಾಧೆಯಾಗಬಾರದೆಂದು ಹಾಗೆಮಾಡಿದೆನೇ ಹೊರತು ಮತ್ತೇನೂ ಇಲ್ಲ. ನನ್ನನ್ನು ಮನ್ನಿಸು. ಕ್ಷಮಿಸಿ ಉದ್ಧಾರಮಾಡು.

**ವಾಜಶ್ರವಸ:**—ವತ್ಸ! ತಾನಾಗಿಬಂದ ಪುತ್ರದುಃಖವೇ ದುಸ್ಸಹವಾದ ನರಕಯಾತನೆಯನ್ನುಂಟುಮಾಡುವ ವಜ್ರಮುಖಿಯಾದ ಕೀಟವಾಗಿರುವಲ್ಲಿ, ನಾನಾಗಿಯೇ ಮಗನನ್ನು ಯಮಪುರಿಗೆ ಕಳುಹಿಸಿ ಆ ದುಃಖವನ್ನು ಹೇಗೆ ಸೈರಿಸಲಿ? (ಯಮದೂತರಿಗೆ ಕೈಮುಗಿದು) ಪೂಜ್ಯರೆ! ಪುತ್ರದಾನಮಾಡಿ.

**ನಚಿಕೇತ:**—ತಂದೆಯೆ! ನಿನ್ನದೆಂತಹ ಅಗಾಧ ಮನಸ್ಸಿನ ಪ್ರೀತಿ! ಪೂಜ್ಯನೆ, ಸಮಾಧಾನಹೊಂದು. ನಾನೂ ಅಗಲಿ ಹೋಗಲಾರೆ. ನಮ್ಮ ಪೂರ್ವಿಕರಾದ ಮಹರ್ಷಿಗಳು ಶ್ರೇಯೋಮಾರ್ಗವನ್ನು ನಂಬಿದ್ದಂತೆಯೇ ನೀನೂ ನಂಬಿ ಸದ್ಗತಿಯನ್ನು ಸಾಧಿಸು. ಶ್ರದ್ಧೆಯಿಂದ ಈ ಇಷ್ಟಿಯನ್ನು ಪೂರ್ತಿಗೊಳಿಸು. ಪೂಜ್ಯನಾದ ನಿನಗೆ ನಾನು ಹೇಳಬೇಕೆ? ಅದರ ಆವಶ್ಯಕತೆಯೇ ಇಲ್ಲ.

**ವಾಜಶ್ರವಸ:**—ನನಗೆ ಸದ್ಗತಿಯೇ ಬೇಡ. ನೀನೊಬ್ಬನಿರು ನಚಿಕೇತ! ನೀನಿದ್ದರೆ ನನಗೆ ಮತ್ತಾವುದೂ ಬೇಡ. ನೀನಿದ್ದರೆ ನನ್ನ ಕುಟೀರವೇ ನನ್ನ ಸತ್ಯಲೋಕ.

**ನಂದಿನೀದೇವಿ:**— (ಮೂರ್ಛೆತಿಳಿದು ಯಮದೂತರ ಕಾಲಿಗೆಬಿದ್ದು ರೋದಿಸುತ್ತ) ನನ್ನ ಮುದ್ದು ನಚಿಕೇತನನ್ನುಳಿಸಿಕೊಡಿ.

ಅವನಿಗೆ ಪ್ರತಿಯಾಗಿ ನನ್ನ ಜೀವವನ್ನು ಸ್ವೀಕರಿಸಿ, ಪುತ್ರ ಭಿಕ್ಷೆಯನ್ನು ಕರುಣಿಸಿ. ನಾನು ಬರುತ್ತೇನೆ.

**ಸುಕನ್ಯೆ:**—ನಾನು ಬರುತ್ತೇನೆ. ಅಣ್ಣನನ್ನು ಬಿಡಿ. ಯಮಲೋಕದಲ್ಲಿ ನಾನು ನಿಮ್ಮೆಲ್ಲರಿಗೂ ಸೇವೆಮಾಡುತ್ತೇನೆ. ನಗುವುದರಲ್ಲಿಕೂಡ ಒಂದು ಕ್ಷಣವನ್ನೂ ಕಳೆಯದೆ ಸೇವೆಮಾಡುತ್ತೇನೆ.

**ಯಮದೂತರು**:— ತೇಜಸ್ವಿಯೆ! ಕಾಲವಿಳಂಬವನ್ನು ನಮ್ಮ ಸ್ವಾಮಿಯು ಸೈರಿಸನು. ಇನ್ನು ಹೊರಡೋಣ. ಈಗ ನೀನು ನಮ್ಮ ಸ್ವಾಮಿಯ ಸ್ವತ್ತು. ನಿನಗೆ ಸ್ವಾತಂತ್ರ್ಯವಿಲ್ಲ.

**ನಚಿಕೇತ:**—ಪೂಜ್ಯರಾದ ಮಾತಾಪಿತೃಗಳೆ! ನಮಸ್ಕರಿಸುವೆನು. ತಮ್ಮೆಲ್ಲರನ್ನೂ ಬೀಳ್ಕೊಳ್ಳಲು ಅನುಜ್ಞೆಕೊಡಿ. ಆಶೀರ್ವದಿಸಿ ಅನುಗ್ರಹಿಸಿ. (ಸುಕನ್ಯೆಯನ್ನಾಲಿಂಗಿಸಿ ಮುದ್ದಿಸಿ) ನಮ್ಮ ಮುದ್ದು ಸುಕನ್ಯೆಯೇ ನೂರುಮಂದಿ ನಚಿಕೇತರಿಗಿಂತ ಹೆಚ್ಚೆಂದುಭಾವಿಸಿ ಪ್ರೀತಿಸಬೇಕೆಂದು ಬೇಡುವೆನು. ತಂಗಿ! ಸುಖವಾಗಿ ಬಾಳಮ್ಮ. ಜಿಂಕೆಯಮರಿಯು ಎಲ್ಲಿಯೋ ಓಡಿಹೋಯಿತು. ಅದನ್ನು ಸುರಕ್ಷಿತವಾಗಿ ಅದರ ತಾಯಿಯ ಬಳಿಗೆ ಸೇರಿಸಮ್ಮ.

**ನಂದಿನೀದೇವಿ:**—(ಅಳುತ್ತ) ಅದು ಮಾತ್ರ ತಾಯಿಯಬಳಿಗೆ ಸೇರಬೇಕು. ಹತಭಾಗ್ಯೆಯಾದ ನಿಮ್ಮ ತಾಯಿಮಾತ್ರ!........... (ಅಳುವಳು)

**ನಚಿಕೇತ:**—ನನ್ನ ತಾಯಿಮಾತ್ರ ನಾನು ಮೊದಲೇ ಬೇಡಿರುವಂತೆ ನನಗೆ ಜನ್ಮ ಜನ್ಮದಲ್ಲೂ ಮಾತೆಯಾಗಬೇಕು. ಅಮ್ಮಾ! ನೀನು ತೇಜಸ್ವಿನಿ. ನನ್ನಂತಹವರು ನೂರಾರುಮಂದಿಗಳಿಗೆ ವಿವೇಕವನ್ನು ಬೋಧಿಸಲು ಶಕ್ತಳು. ಸೈರಿಸು. ನೀವೇ ನನಗೆ ಜನ್ಮ ಜನ್ಮಗಳಲ್ಲಿಯೂ ತಾಯಿತಂದೆಗಳಾಗಬೇಕು; ಸುಕನ್ಯೆಯೇ ನನಗೆ ತಂಗಿಯಾಗಬೇಕು. ನಾನು ಮುಂದಿನ

ಜನ್ಮಗಳಲ್ಲಾದರೂ ಮಾತಾಪಿತೃಸೇವೆಮಾಡುವ ಭಾಗ್ಯವು ದೊರೆಯಬೇಕು. ಅಯ್ಯೋ! ಅಗಲುವುದೆಷ್ಟು ಕಷ್ಟ!

**ನಂದಿನೀದೇವಿ:**—ಗುಣಧಾಮ ನನ್ನ ಮುದ್ದು ನಚಿಕೇತ! (ರೋದಿಸುತ್ತ) ನಿನ್ನ ಸವಿನುಡಿಗಳಿಂದ ನನ್ನ ದುಃಖವನ್ನು ಉಕ್ಕಿಸಿ ನನ್ನ ಹೃದಯವನ್ನು ಸೀಳಬೇಡ, ಕಂದ.

**ಯಮದೂತರು:**—ಪೂಜ್ಯವಟುವೆ! ವಿಮಾನಕ್ಕೆ ಬಿಜಯಮಾಡು. ಆರ್ಯೆ! ಸೈರಿಸು. ಈ ವಟುವು ಈಗ ಯಮಧರ್ಮರಾಜನ ಸ್ವತ್ತು.

**ನಂದಿನೀದೇವಿ:**—(ನಚಿಕೇತನನ್ನು ತೋಳುತೆಕ್ಕೆಯಲ್ಲಿ ತಬ್ಬಿಕೊಂಡು ರೋದಿಸುತ್ತ) ಅವನಲ್ಲ ಬರುವವನು, ನಾನು, ನಾನು. ಆರ್ಯರೇ ನನ್ನನ್ನು ಕರೆದುಕೊಂಡುಹೋಗಿ! ಅಯ್ಯೋ! ನಾನೇಕೆ ಹುಟ್ಟಿದೆ? ಮಗುವೆ, ಮಗುವೇ,...........(ಮೂರ್ಛಿತೆಯಾಗಿ ನೆಲಕ್ಕುರುಳುವಷ್ಟರಲ್ಲಿ ನಚಿಕೇತನು ಪ್ರೀತಿಕರುಣೆಗಳಿಂದ ವಿಹ್ವಲನಾಗಿ ಹಿಡಿದುಕೊಂಡು ಮೆಲ್ಲಗೆ ನೆಲದಮೇಲೆ ಕುಳಿತು, ತನ್ನ ತೊಡೆಯಮೇಲೆ ಆಕೆಯ ತಲೆಯನ್ನಿಟ್ಟು ಮಲಗಿಸುವನು.)

(ತೆರೆಯು ಬೀಳುವುದು)

# ಮೂರನೆಯ ಅಂಕ

## ದೃಶ್ಯ ೧

[ವಾಜಶ್ರವಸನ ಆಶ್ರಮದ ಬಳಿಯ ಒಂದು ಬಯಲು. ರಾತ್ರಿಯ ವೇಳೆ. ಬೆಳದಿಂಗಳು. ವಾಜಶ್ರವಸನು ದುಃಖಾಕ್ರಾಂತನಾಗಿ ಒಂದೆಡೆ ಕುಳಿತಿರುವನು. ಅಲ್ಲಿ ಕುಳಿತಿರಲಾರದೆ ನಿಟ್ಟುಸಿರುಬಿಡುತ್ತ, ಹೊಟ್ಟೆಯ ಸಂಕಟವನ್ನು ಸೈರಿಸಲಾರದೆ ಸುತ್ತಾಡುವನು. ಕೊನೆಗೆ ಎದೆಯನ್ನು ಹಿಡಿದುಕೊಂಡು, ದುಸ್ಸಹವಾದ ಯಾತನೆಯನ್ನು ಸೂಚಿಸುವ ದೀರ್ಘ ನಿಶ್ವಾಸವನ್ನು ಬಿಡುವನು.]

**ವಾಜಶ್ರವಸ:**—(ಸ್ವಗತ) ವಯಸ್ಸಾಯಿತು. ಆದರೆ ವಿವೇಕ ಬರಲಿಲ್ಲ. ನನ್ನಂತಹ ಪಾಪಿಗೆ ಅಂತಹ ಪುತ್ರರತ್ನವು ದಕ್ಕೀತೆ? ನನ್ನ ಜೀವನವೇ ಅಜ್ಞಾನರೋಷಗಳ ಹಾಸು ಹೊಕ್ಕುಗಳಿಂದ ನಿರ್ಮಿತವಾದ ಅಸಹ್ಯಕರವಾದ ಬಟ್ಟೆಯ ಬೊಂತೆಯಾಯಿತು. ವಾಮದೇವನು ಎಷ್ಟು ಧನ್ಯನೋ! (ಬಿರುಗಣ್ಣುಗಳಿಂದ ಕೂಡಿ ತಲೆಯನ್ನಾಡಿಸಿ) ವಾಜಶ್ರವಸ ಹತಕ! ಆ ಪುಣ್ಯಾತ್ಮನ ಹೆಸರನ್ನೆತ್ತಬೇಡ. ಪವಿತ್ರವಾದ ಅವನ ನಾಮಧೇಯವನ್ನು ಕಲುಷಿತಗೊಳಿಸಬೇಡ. ಏನೇನೋ ಯೋಚನೆಗಳು. ಹಾಳು ತಲೆಯೇ! ಸಿಡಿದು ಹೋಗು. (ಕೆಳಗೆ ಕುಳಿತುಕೊಳ್ಳುವನು.)

**ಸುಕನ್ಯೆ:**—(ಜಿಂಕೆಯ ಮರಿಯನ್ನು ಒಡಿದು ಪ್ರವೇಶಿಸಿ) ತಂದೆಯೆ! ಒಬ್ಬನೇ ಕುಳಿತು ಏನನ್ನೋ ಯೋಚಿಸುತ್ತಿರುವೆ. ಬೆಳಗಿನಿಂದಲೂ ಆಹಾರವಿಲ್ಲ. ನಿನ್ನೆ ರಾತ್ರಿ ಉಪವಾಸ. ಮಧ್ಯಾಹ್ನದಿಂದಲೂ ಬಿಸಿಲಿನಲ್ಲೇ ಕುಳಿತಿದ್ದೆ. ಸಂಜೆಯೂ ಆಯಿತು.

**ವಾಜಶ್ರವಸ:**—(ಹುಚ್ಚನಂತೆ ಮೇಲಕ್ಕೆದ್ದು) ನಿನಗೆ ಹಾರವೂ ಇಲ್ಲ. ನನಗೆ ಆಹಾರವೂ ಇಲ್ಲ.

**ಸುಕನ್ಯೆ:**—ತಂದೆಯೆ! ಹುಚ್ಚನಂತೆ ಮಾತನಾಡುತ್ತಿರುವೆ. ನಿನ್ನ ಮಾತೇ ಅರ್ಥವಾಗುವುದಿಲ್ಲ. ನಿನ್ನ ಸ್ಥಿತಿಯನ್ನು ನೋಡಿ ನನಗೆ........(ಅಳುವಳು)

**ವಾಜಶ್ರವಸ:**—ಅಹುದು ಕಂದ. ನನಗೆ ಹುಚ್ಚಾದರೂ ಹಿಡಿದಿದ್ದರೆ ನನ್ನ ಮನಸ್ಸಿಗೆ ಈ ಸಂಕಟವಿರುತ್ತಿರಲಿಲ್ಲ. ನಿನಗೆ ಹಾರವನ್ನು ಕಟ್ಟಿಕೊಟ್ಟು ನಿನಗೆ ಅಲಂಕಾರಮಾಡಿ ಆನಂದಿಸಲು ಅಣ್ಣನಿಲ್ಲವಲ್ಲ. ಅದಕ್ಕೇ ನಿನಗೆ ಹಾರವಿಲ್ಲವೆಂದೆ. ಅಳಬೇಡಮ್ಮ.

**ಸುಕನ್ಯೆ:**—(ಅಳುತ್ತ) ತಂದೆಯೆ, ಜ್ಞಾಪಿಸಬೇಡ.

**ವಾಜಶ್ರವಸ:**—ಅಳಬೇಡ ಕಂದ. ನಚಿಕೇತ ಹೇಳಿ ಹೋಗಿದ್ದಾನೆ, ನಿನ್ನನ್ನು ನೂರುಮಂದಿ ನಚಿಕೇತರಿಗಿಂತ ಹೆಚ್ಚಾಗಿ ಪ್ರೀತಿಸಬೇಕೆಂದು. ಅವನು ದೇವರಿಗೆ ಸಮಾನ. ಅವನ ವಾಣಿಯೇ ನನಗೆ ವೇದ. ನನಗೆ ಬೇರೆ ವೇದವೇ ಬೇಡ. (ಅವಳನ್ನಪ್ಪಿಹುಸಿ ಸಂತೋಷದಿಂದ) ನನ್ನ ಸುಕನ್ಯೆ, ನನ್ನ ಬಂಗಾರ, ನನ್ನ ಜೀವರತ್ನ. (ತನ್ನ ಮೈಗೆ ಸೋಕಿದ ಜಿಂಕೆಯಮರಿಯನ್ನು ನೋಡಿ) ಇದನ್ನೇಕೆ ತಂದೆಯಮ್ಮ?

**ಸುಕನ್ಯೆ:**—ಇದು ತನ್ನ ತಾಯಿಯ ಹತ್ತಿರ ಹಾಲು ಕುಡಿಯುತ್ತ ಬಾಲವನ್ನು ಕುಣಿಸುತ್ತ, ತನ್ನ ತಾಯಿಯಿಂದ ನೆಕ್ಕಿಸಿಕೊಳ್ಳುತ್ತಿದ್ದುದನ್ನು ಕಂಡೆ. "ಅಣ್ಣ ಮಾತ್ರ ತಾಯಿಯ ಹತ್ತಿರವಿದ್ದು ಆನಂದಪಡಕೂಡದು. ಇದಕ್ಕೆ ಮಾತ್ರ ತಾಯಿಬಳಿ ಸುಮ್ಮಾನ" ಎಂದುಕೊಂಡು, ಇದನ್ನು ಹೊತ್ತುತಂದೆ. ಇದನ್ನು ಇನ್ನು ತಾಯಿಯ ಬಳಿಗೆ ಬಿಟ್ಟರೆ ಕೇಳು. ನಿಜವಾಗಿಯೂ ಬಿಡುವುದೇ ಇಲ್ಲ. ದೇವರೇ ಬಂದು, ಅಣ್ಣನನ್ನ ಕರೆಯಿಸಿಕೊಟ್ಟು ಈ ಮರಿಯನ್ನು ಬಿಡಿಸಿ ಅದರ ತಾಯಿಗೆ ಕೊಡಲಿ!

**ನಂದಿನೀದೇವಿ:**—(ಕಂಬನಿಯನ್ನು ಮಿಡಿಯುತ್ತಾ ಪ್ರವೇಶಿಸಿ ನಿಂತಿದ್ದು, ತನ್ನನ್ನು ಕಾಣದೆಯೇ ಮಾತನಾಡುತ್ತಿರುವ ಸುಕನ್ಯೆಯ ಹೆಗಲಿನ ಮೇಲೆ ಹಿಂಭಾಗದಿಂದ ಕೈಯಿಟ್ಟು) ಬೇಡಮ್ಮ ಹಾಗೆ ಮಾಡ ಬೇಡ, ತಾಯಿ. (ಅಳುತ್ತ) ಯಾವ ಜನ್ಮದ ಪಾಪದಿಂದಲೋ ಈ ಅಗಲಿಕೆ ಬಂದಿದೆ. ನಿಮ್ಮ ಅಣ್ಣ ಇದ್ದರೆ ಏನೆನ್ನುತ್ತಿದ್ದ ಬಲ್ಲೆಯಾ?

**ಸುಕನ್ಯೆ:**—ಅವನಿದ್ದರೆ ನಾನು ಮರಿಯನ್ನು ಹೀಗೆ ತರುತ್ತಲೇ ಇರುತ್ತಿರಲಿಲ್ಲಮ್ಮ.

**ನಂದಿನೀದೇವಿ:**—(ಅಳುತ್ತ) ಕಂದಾ, ಕಂದಾ, ನಿನಗೆ....

**ಸುಕನ್ಯೆ:**—ಅಮ್ಮಾ, ಅಳಬೇಡಮ್ಮ. ನನಗಂತು ಅತ್ತು ಅತ್ತು ಇನ್ನು ಅಳುವೇ ಬರದಂತಾಗಿದೆ. ನೀನು ಅತ್ತರೆ ನಾನು ಹೊಳೆಯೊಳಕ್ಕೆ ಬಿದ್ದುಬಿಡುತ್ತೇನೆ. ಇಷ್ಟು ಹಗರಣವನ್ನೂ ತಂದಿಟ್ಟ ಹಾಳು ಹೊಳೆ ಪ್ರವಾಹ ಇನ್ನೂ ಇಳಿದಿಲ್ಲ.

**ವಾಜಶ್ರವಸ:**—ನಿಜ. ಅದು ಹೇಗೆ ಇಳಿದೀತು? ಆಶ್ರಮದಲ್ಲಿ ನಡೆದ ಹುಚ್ಚು ಕೆಲಸಕ್ಕೆ ಸರಿಯಾದ ಹುಚ್ಚುಹೊಳೆ. ನಂದಿನಿ! ನಚಿಕೇತ ಹೇಳಿದ ಉಪದೇಶ ಮರೆತೀಯೆ? ಎಷ್ಟು ಹೇಳಿದ... ಅವನ ಪ್ರೀತಿಯೆಷ್ಟು! ನನಗೆ ಅವನೇ ಗುರು. ಸುಕನ್ಯೆ ನೂರು ಮಕ್ಕಳಿಗೆ ಸಮಾನ ಈಗ. ಒಂದು ಮಗುವಲ್ಲ.

**ಸುಕನ್ಯೆ:**—ಈ ಮರಿ ವಿಷಯಕ್ಕೆ ಅಣ್ಣ ಏನು ಹೇಳುತ್ತಿದ್ದನಮ್ಮ?

**ನಂದಿನೀದೇವಿ:**—(ನಿಟ್ಟುಸಿರುಬಿಟ್ಟು) ಅಯ್ಯೋ......ಏನು ಹೇಳ ಲಮ್ಮ.......ಕೇಳು ತಾಯಿ. ಎಲ್ಲ ಪ್ರಾಣಿಗಳನ್ನೂ ಸಂತೋಷ ಪಡಿಸಬೇಕೆಂದು ಆ ದಿನ ಹೇಳಿದ್ದನಲ್ಲಮ್ಮ. (ಶೂನ್ಯ ದೃಷ್ಟಿ ಯಿಂದ) ಹೇಳಿದ್ದನಲ್ಲೆ! ಈ ದಿನವೂ ಹೇಳುತ್ತಿದ್ದ. ಅದರ ತಾಯಿ ಬಳಿಗೆ ಅದನ್ನು ಬಿಟ್ಟು, ಅವೆರಡು ಪ್ರಾಣಿಗಳನ್ನೂ ಸಂತೋಷಪಡಿಸೆಂದು ಹೇಳುತ್ತಿದ್ದ, ಕಂದ.

**ಸುಕನ್ಯೆ:**—(**ಅಳುತ್ತ**) ಅವನೆಷ್ಟು ಒಳ್ಳೆಯ ಅಣ್ಣ! ನಾನೆಷ್ಟು ಕೆಟ್ಟ ತಂಗಿ! ಮರಿಯನ್ನು ಬಿಟ್ಟು ಬರುತ್ತೇನೆ. ಅದಕ್ಕೂ ಅದರ ತಾಯಿಗೂ ಮುತ್ತುಕೊಟ್ಟು ಬರುತ್ತೇನೆ. (**ಅಳುತ್ತಾ ಹೋಗು**ವಳು.)

**ವಾಜಶ್ರವಸ:**—(**ರೋದಿಸುತ್ತ**) ಇನ್ನೆಲ್ಲಿ ನನ್ನ ಮುದ್ದು ನಚಿಕೇತ!

**ಋತ್ವಿಜರಲ್ಲಿ ಹಿರಿಯು:**—(ಪ್ರವೇಶಿಸಿ) ಸಮಾಧಾನ ಹೊಂದಿ. ನೀವುಗಳೇ ಹೀಗೆ ಮಾಡಿದರೆ, ಗತಿಯೇನು?

**ವಾಜಶ್ರವಸ:**—(ಏನನ್ನೋ ಯೋಚಿಸುತ್ತಿದ್ದು) ನಂದಿನಿ! ನೀವೆಲ್ಲರೂ ಆಶ್ರಮಕ್ಕೆ ಹೊರಟುಹೋಗಿ. ನನ್ನ ಮನಸ್ಸೇನೋ ಈಗಿನ ನಮ್ಮ ಯಜ್ಞಶಾಲೆಯಂತೆಯೇ ಮೇಲೆ ಆವರಣರಹಿತವಾಗಿ, ಸುತ್ತಲೂ ಆವರಣಸಹಿತವಾಗಿ, ಶೂನ್ಯವಾಗಿದೆ.

**ನಂದಿನೀದೇವಿ:**—(ಸ್ವಗತ) ಇವರೇಕೆ ಹೀಗೆ ಮಾತನಾಡುವರು? ಬುದ್ಧಿವೈಕಲ್ಯದಶೆಯು ಸಮಿಾಪಿಸುತ್ತಿದೆಯೋ! ಈ ಹತಭಾಗ್ಯೆಗೆ ಇನ್ನೂ ಏನೇನು ವಿಪತ್ತುಗಳು ಕಾದಿವೆಯೊ!........(ಪ್ರಕಾಶ) ದೇಹಸ್ಥಿತಿ ಸರಿಯಾಗಿಲ್ಲವೆ?

**ವಾಜಶ್ರವಸ:**—ಸರಿಯಾಗಿದೆ. ನನ್ನಂತಹವನ ದೇಹಸ್ಥಿತಿ ಸರಿಯಾಗಿಯೇ ಇರುತ್ತದೆ. ಅವರು ಹೇಳಿದರು ನೋಡು. ಅವರಾರೋ ಬಂದಿದ್ದಾರಲ್ಲ, ಅವರು. ಅವರುಹೇಳಿದಂತೆ ನಾವು ನಚಿಕೇತನ ತೇಜಸ್ಸಿಗೆ ಸರಿಯಾಗಿ ವರ್ತಿಸಬೇಕು. ನಚಿಕೇತ! ಈಗ ನನ್ನ ಮನಸ್ಸಿನಲ್ಲಿರುವುದು ಪ್ರೀತಿ, ಪಶ್ಚಾತ್ತಾಪ, ಇವೆರಡೇ. (ನಂದಿನೀದೇವಿಯು ದುಃಖದಿಂದ ಕಣ್ಣೊರಸಿಕೊಳ್ಳುವಳು. ಎಲ್ಲರೂ ಹೋಗುವರು.)

(ತೆರೆಯು ಬೀಳುವುದು.)

## ದೃಶ್ಯ ೨

[ಯಮಸೌಧದಲ್ಲಿ ಅಗ್ನ್ಯಾಗಾರದಿಂದ ಬರುವ ಮಾರ್ಗ. ಭಗವಂತನನ್ನು ಧ್ಯಾನಿಸುತ್ತ ನಾರದರು ಪ್ರವೇಶಿಸುವರು.]

**ನಾರದ:**—(ನೇಪಥ್ಯದ ಕಡೆಗೆ ನೋಡಿ, ಕೈ ತೋರಿಸಿ) ಇದೋ, ಯಮಧರ್ಮರಾಜನ ಸೌಧದ ಅಗ್ನ್ಯಾಗಾರವು ಇಲ್ಲಿ ಶೋಭಿಸುತ್ತಿದೆ. ಇದೋ! ತೇಜಸ್ವಿಯಾದ ನಚಿಕೇತನು ಆತನನ್ನು ಕಾಣಬೇಕೆಂಬ ತವಕದಿಂದ ಕುಳಿತಿದ್ದಾನೆ. ಇಲ್ಲಿಗೆ ಕರೆದು ಮಾತನಾಡಿಸುವೆನು. ವತ್ಸ! ನಚಿಕೇತ, ಇಲ್ಲಿ ಬಾ.

**ನಚಿಕೇತ:**—(ಪ್ರವೇಶಿಸಿ) ಯಾರು, ನನ್ನನ್ನು ಕೂಗಿದವರು? (ಮುಂದೆ ಬಂದು ನಾರದರನ್ನು ನೋಡಿ) ತಾವೆ! ಪೂಜ್ಯರೆ, ವಂದಿಸುವೆನು. ತಮ್ಮ ದರ್ಶನದಿಂದ ಧನ್ಯನಾದೆನು.

**ನಾರದ:**—ದೀರ್ಘಾಯುವಾಗಿ ಬಾಳು.

**ನಚಿಕೇತ:**—ಪೂಜ್ಯರೆ! ಶ್ರೇಯಸ್ವಿಯಾಗಿ ಬಾಳೆಂದು ಆಶೀರ್ವದಿಸಿ' ಅನುಗ್ರಹಮಾಡಿ. ಶ್ರೇಯಸ್ಸನ್ನು ಸಾಧಿಸದ ಆಯುಸ್ಸೇ ನನಗೆ ಬೇಡ.

**ನಾರದ:**—(ಸ್ವಗತ) ಎಂತಹ ಮಾತನ್ನಾಡಿದ! (ಪ್ರಕಾಶ) ವತ್ಸ! ಯಮಧರ್ಮರಾಜನನ್ನು ಕಂಡಿದ್ದೆಯಾ? ನೀನು ಇಲ್ಲಿಗೆ ಬಂದು ಎಷ್ಟು ಕಾಲವಾಯಿತು?

**ನಚಿಕೇತ:**— ಇದೇ ಮೂರನೆಯ ದಿನ. ಯಮಧರ್ಮರಾಜನ ಸಂದರ್ಶನ ಭಾಗ್ಯವು ನನಗೆ ದೊರೆತಿಲ್ಲ.

**ನಾರದ:**—(ಹುಸಿಮುನಿಸಿನಿಂದ) ಸಂದರ್ಶನವಂತೆ, ಭಾಗ್ಯವಂತೆ! ನೀನೊಬ್ಬ ಉನ್ಮತ್ತ. ನಿನಗೆ ಬುದ್ಧಿ ಹೇಳಲು ನಾನು ಬಂದಿದ್ದೇನೆ. ಪದವೀಧರನಾದ ದಂಡಧರನು ದುರಹಂಕಾರಿ.

ಆದುದರಿಂದಲೇ ಅವನು ನಿನ್ನಂತಹ ಅತಿಥಿಯನ್ನು ಹೀಗೆ ಅನಾದರದಿಂದ ಕಂಡು, ಮೂರುದಿವಸಕಾಲ ಉಪವಾಸದಿಂದ ಬಳಲಿಸಿದ್ದಾನೆ.

**ನಚಿಕೇತ:**—ಪೂಜ್ಯರೆ! ವಿನೋದಕ್ಕಾಗಿ ತಾವು ಹೀಗೆ ಹೇಳುತ್ತಿರುವಿರಿ. ಅಲ್ಲವೆ?....ಆತನು ಮಹಾನುಭಾವ; ನನ್ನ ಆರಾಧ್ಯ ದೈವ. ಯಮಧರ್ಮರಾಜನಿಗೆ ನನ್ನನ್ನು ನೋಡಲು ಓಡಿ ಬರಬೇಕಾದುದೊಂದೇ ಕೆಲಸವೆ? ಆತನು ನನ್ನಲ್ಲಿ ವಿಶೇಷವಾಗಿ ಅನುಗ್ರಹಮಾಡಿದ್ದಾನೆ. ಆ ಮಹಾನುಭಾವನ ಅಗ್ನ್ಯಾಗಾರದಲ್ಲಿ ನಾನು ಭಗವಂತನನ್ನು ಧ್ಯಾನಿಸುವ ಅನರ್ಘ್ಯ ಭಾಗ್ಯವೇ ನನಗೆ ದೊರೆತಿದೆ.

**ನಾರದ:**—ನೀನು ಉನ್ಮತ್ತನೇ ಎಂಬುದು ಸ್ಥಿರವಾಯಿತು. ನನ್ನ ಮಾತನ್ನು ಕೇಳು. ಮನದಳಲಿನಿಂದ ತೊಳಲಿ ಬಳಲುತ್ತಿರುವ ನಿನ್ನ ಮಾತಾಪಿತೃಗಳನ್ನೂ, ಸಹೋದರಿಯನ್ನೂ ಸಂತೋಷ ಪಡಿಸು. ಭೂಲೋಕಕ್ಕೆ ಹಿಂತಿರುಗಿ ಸುಖಿಯಾಗು.

**ನಚಿಕೇತ:**—(ನಗುತ್ತ) ಪೂಜ್ಯರೆ! ದೇವರ್ಷಿನಾರದರೇ ಹೀಗೆ ಉಪದೇಶಿಸಿದಮೇಲೆ ಹೇಳತಕ್ಕುದೇನುಂಟು? ಅಗ್ನಿಯಲ್ಲೇ ಚಳಿಯನ್ನು ಕಂಡಮೇಲೆ ಮುಂದೆ ಗತಿಯೇನು? ಅದೂ ಹೋಗಲಿ. ನಾನು ಹಿಂತಿರುಗಿ ಹೋಗಿ ತಂದೆಗೆ ದತ್ತಾಪಹಾರ ದೋಷವನ್ನು ತಂದೊಡ್ಡಲೆ?

**ನಾರದ:**—ನೀನು ಇಲ್ಲಿದ್ದು ಮಾಡುವುದೇನು?

**ನಚಿಕೇತ:**—ಯಮಧರ್ಮರಾಜನ ಸೇವೆ, ಭೂಲೋಕದ ಉದ್ಧಾರ.

**ನಾರದ:**—(ಗಹಗಹಿಸಿ ನಕ್ಕು) ಏನು, ಭೂಲೋಕದ ಉದ್ಧಾರವೆ?

**ನಚಿಕೇತ:**—ಅಹುದು ಮೊದಲು ಆತ್ಮೋದ್ಧಾರ. ಆ ಬಳಿಕ ಹಿರಣ್ಯಗರ್ಭನ ಅನುಗ್ರಹದಿಂದ ಭೂಲೋಕದ ಉದ್ಧಾರ.

ಯಮಧರ್ಮರಾಜನಿಂದ ನಿತ್ಯಸುಖಸಾಧಕವಾದ ಅಗ್ನಿವಿದ್ಯೆಯನ್ನೂ, ದೇಹಾತೀತವಸ್ತುವಿನ ನಿಜಸ್ವರೂಪವನ್ನೂ, ತಿಳಿದುಕೊಂಡು, ಜಿಜ್ಞಾಸುಗಳಾದ ಸಾಧಕರಿಗೆ ಜ್ಞಾನಜ್ಯೋತಿಯ ತನಿಬೆಳಕನ್ನು ತೋರಿಸುವೆನು.

**ನಾರದ**:—(ನಚಿಕೇತನನ್ನಾಲಂಗಿಸಿ) ವತ್ಸ! ಶ್ರೇಯಸ್ವಿಯಾಗಿ ಬಾಳು. ನಿನ್ನ ಪ್ರಯತ್ನವು ಸಫಲವಾಗಲಿ. ಆದರೆ, ಅದು ಸುಲಭವಲ್ಲ. ಅನೇಕ ಕಷ್ಟಗಳು ನಿನಗೆ ಕಾದಿವೆ.

**ನಚಿಕೇತ**:—ಪೂಜ್ಯರೆ! ಕಲ್ಯಾಣಸಾಧನೆಯ ಈ ಪ್ರಯತ್ನದಲ್ಲಿ ಕಷ್ಟವೂ ಸುಖ. ತಮ್ಮ ಅನುಗ್ರಹವೊಂದೇ ನನ್ನ ವಜ್ರಕವಚ.

(ಇಬ್ಬರೂ ಹೋಗುವರು.)

# ದೃಶ್ಯ ೩

[ಯಮಧರ್ಮರಾಜನ ಅಂತಃಪುರ. ರತ್ನಖಚಿತವಾದ ಮಂಟಪವೊಂದರಲ್ಲಿ ದಿವ್ಯಾಸನದಮೇಲೆ ಯಮಧರ್ಮರಾಜನೂ, ಆತನ ಪತ್ನಿ ಶ್ಯಾಮಲಾದೇವಿಯೂ ಮಂಡಿಸಿರುವರು. ಗೋಡೆಗಳೆಲ್ಲ ಸುವರ್ಣಕಾಂತಿಯಿಂದಲೂ ಚಿತ್ರವಿಚಿತ್ರವಾದ ಕೆತ್ತನೆಯ ಕಮಾನು, ಮೇಲುಕಟ್ಟು ಮುಂತಾದವುಗಳಿಂದಲೂ ಕೂಡಿ ಥಳಥಳಿಸುತ್ತಿರುವುವು. ಬಾಲಕ ಬಾಲಕಿಯರು ಚಿನ್ನದ ಕೊಳಲುಗಳನ್ನೂ, ಇತರ ವಾದ್ಯಗಳನ್ನೂ ಬಾರಿಸುತ್ತ ಗಾನ ನೃತ್ಯಗಳಲ್ಲಿ ವ್ಯಾಪೃತರಿರುವರು.]

**ಶ್ಯಾಮಲಾದೇವಿ:**—(ಪರಿಜನರು ದಂಪತಿಗಳಿಗೆ ಚಾಮರವನ್ನು ಬೀಸುತ್ತಿರುವಲ್ಲಿ ಗಾನವು ಮುಗಿದ ಮೇಲೆ) ಪ್ರಾಣೇಶ್ವರ! ಇದೇನು, ನಿನ್ನ ಈ ದಿನದ ಆನಂದ ?

**ಯಮಧರ್ಮರಾಜ:**—ನನ್ನ ಯಾಮ್ಯ ಪಟ್ಟವು ಕೊನೆಗಾಣುವ ದಿನವು ಸ್ವಲ್ಪಮಟ್ಟಿಗಾದರೂ ಸಮೀಪಿಸುವಂತೆ ಮಾಡುವ ಮಹಾಪುರುಷ ನಚಿಕೇತನನ್ನು ಕಾಣುವೆನೆಂಬ ಆನಂದ.

**ಶ್ಯಾಮಲಾದೇವಿ:**--ಯಾಮ್ಯ ಪಟ್ಟವು ಕೊನೆಗಾಣಬೇಕೆಂದು ಸಂತತವೂ ಬಯಸುತ್ತಲೂ, ಆವರವರ ಕರ್ಮಗಳಿಗೆ ತಕ್ಕ ಫಲಾನುಭವಗಳನ್ನು ವಿಧಿಸುತ್ತಲೂ ಇರುವ ನಿನ್ನ ವಿಚಿತ್ರ ವರ್ತನೆಯೇ ನನಗೆ ಅರ್ಥವಾಗದು.

**ಯಮಧರ್ಮರಾಜ:**—ದೇವಿ! ಈರೀತಿ ವರ್ತಿಸುತ್ತಿರುವ ಈ ದಂಡಧರನು ಸಂತೋಷದಿಂದ ಹಾಗೆ ಮಾಡುತ್ತಿಲ್ಲ. ರೋಗಿಗಳಿಗೆ ಕಟು ತಿಕ್ತ ಕ್ಷಾರ ರಸಭರಿತಗಳಾದ ಔಷಧಗಳನ್ನು ಕೊಡುತ್ತಿದ್ದರೂ ಅವರು ಅವಿವೇಕದಿಂದ ರೋಗಗಳನ್ನು ತಂದುಕೊಂಡುದಕ್ಕಾಗಿ ಮನಮರುಗುವ ಸದ್ವೈದ್ಯನ ಹೃದಯದಂತೆ ನನ್ನ ಹೃದಯವೂ ದುಸ್ಸಹವಾದ ಯಾತನೆಯಿಂದ ಗೋಳಿಡು

ತ್ತಿದೆ. ಶ್ಯಾಮಲಾ! ಮಹಾಪುರುಷನಾದ ಅತಿಥಿಯು ಬಂದಿರುವ ನೆಂದು ನಾನು ನವನಿಧಿಗಳನ್ನು ಕಂಡ ಕಡುಬಡವನಂತೆ ಆನಂದಿಸುತ್ತಿದ್ದೇನೆ. ಯಾಮ್ಯಪಟ್ಟದ ಅವಧಿಯು—ಈ ದಂಡಧರನ ಅಧಿಕಾರ ಪ್ರದರ್ಶನದ ಅವಧಿಯು—ಯಾವ ಮಹಾತ್ಮನಿಂದ ಒಂದು ದಿನದಷ್ಟು ಕಡಮೆಯಾದರೂ ನನಗೆ ಅಮಿತವಾದ ಆನಂದ.

**ಶ್ಯಾಮಲಾದೇವಿ:**—ನಾಥ! ಕರುಣೆಯ ಸುಧಾಕಲಶಕ್ಕೆ ಕ್ರೌರ್ಯ ಪ್ರದರ್ಶನ ಕಲುಷಿತವಾದಂತೆ ತೋರುವ ಹೊರಲೇಪವುಂಟಾ ಗಿರುವುದು, ವಿಧಿವಿಲಾಸದ ಕುತಂತ್ರವೇ ಸರಿ.

**ಪ್ರತೀಹಾರಿ:**—(ಪ್ರವೇಶಿಸಿ ವಂದಿಸಿ) ನಾರದಮಹರ್ಷಿಗಳು ಬಿಜಯ ಮಾಡಿದ್ದಾರೆ.

**ಯಮಧರ್ಮರಾಜ:**— ಪ್ರವೇಶಿಸು. (ಪ್ರತೀಹಾರಿಯು ವಂದಿಸಿ ತೆರಳುವನು. ನಾರದರು ಪ್ರವೇಶಿಸುವರು) (ಶ್ಯಾಮಲಾದೇವಿಯೊಡನೆ ಕೆಳಕ್ಕಿಳಿದು ಬಂದು) ಪೂಜ್ಯರಿಗೆ ವಂದಿಸುವೆನು. (ದಂಪತಿ ಗಳೀರ್ವರೂ ನಮಸ್ಕರಿಸುವರು. ಯಮಧರ್ಮರಾಜನು ನಾರದ ರನ್ನು ತನ್ನ ದಿವ್ಯಾಸನದಲ್ಲಿ ಕುಳ್ಳಿರಿಸಿ ಸತ್ಕರಿಸಿ ಆರಾಧಿಸುವನು. ಮತ್ತೆ ದಂಪತಿಗಳೀರ್ವರೂ ನಮಸ್ಕರಿಸುವರು)

**ನಾರದ:**—ಶ್ರೇಯೋಸ್ತು. ಯಮಧರ್ಮರಾಜ! ನಾನು ಸತ್ಯಲೋಕ ದಿಂದ ಬಂದೆನು. ನಿನ್ನ ಅತಿಥಿಯಾಗಿರುವ ನಚಿಕೇತನನ್ನೂ ನಿನ್ನ ಅಗ್ನ್ಯಾಗಾರದಲ್ಲಿ ನೋಡಿದ್ದೆನು. ಅವನು ಭಕ್ತಿಯಿಂದ ದರ್ಶನಾಕಾಂಕ್ಷಿಯಾಗಿದ್ದಾನೆ.

**ಯಮಧರ್ಮರಾಜ :**— ಪರೀಕ್ಷಾರ್ಥವಾಗಿ ಮೂರುದಿನಗಳೂ ಔದಾಸೀನ್ಯವನ್ನು ನಟಿಸಿದೆನು. ದೇವಿ! ಮಾನ್ಯ ನಚಿಕೇತ ನನ್ನು ನೀನೇ ಅಗ್ನ್ಯಾಗಾರದಿಂದ ಕರೆದುಕೊಂಡು, ಬಾ. (ಶ್ಯಾಮಲಾದೇವಿಯು ಹೋಗುವಳು)

**ನಾರದ:**-ನಿನ್ನ ಅತಿಥಿಯನ್ನು ವಿಧವಿಧದಿಂದಲೂ ಪರೀಕ್ಷಿಸಿ ಅವನು ಅರ್ಹನೆಂದು ಕಂಡರೆ ಪರಾ ವಿದ್ಯೆಯನ್ನು ಅವನಿಗೆ ಉಪದೇಶಿಸ ಬೇಕೆಂದು ಹಿರಣ್ಯಗರ್ಭನು ಸಂದೇಶವನ್ನು ಕಳುಹಿಸಿದ್ದಾನೆ.

**ಯಮಧರ್ಮರಾಜ:**—ನಾರದ ಮಹರ್ಷಿಗಳೆ! ಎಂತಹ ಆನಂದ ವಾರ್ತೆ! ಆ ದಿನ ನರಕದಲ್ಲೆಲ್ಲ ಅತಿ ಪ್ರಕಾಶಮಾನವಾದ ಬೆಳಕು ಕಂಡುದು ಇದಕ್ಕಾಗಿಯೆ! ಮಹಾಪುರುಷನೊಬ್ಬನು ಜನಿಸುವನೆಂದು ನಾನು ತರ್ಕಿಸಿದ್ದೆ. ಈಗ ಬಂದಿರುವ ಅತಿಥಿ ನಚಿಕೇತನು ಆ ಮಹಾಪುರುಷನೇ ಆಗಿರಬೇಕೆಂದು ನಾನು ಊಹಿಸಿದ್ದುದು ನಿಜವಾಯಿತು. ಹಿರಣ್ಯಗರ್ಭನ ಸಂದೇಶ ವನ್ನು ತಿಳಿಸಿದ ಅನುಗ್ರಹಕ್ಕಾಗಿ ನಾನು ಕೃತಜ್ಞನು.

**ನಾರದ:**—ಇನ್ನು ನಾನು ಹೊರಡುವೆನು.

**ಯಮಧರ್ಮರಾಜ:**—(ನಾರದನಿಗೆ ಯಂತ್ರದ ಬೊಂಬೆಯಂತೆ ನಮಿಸಿ ಬೀಳ್ಕೊಂಡು, ಹೃದಯದ ಆನಂದದಿಂದಲೂ ಭಾವಗಳ ಪಾರವಶ್ಯ ದಿಂದಲೂ ಕೂಡಿ) ನನ್ನಿಂದ ಎಂತಹ ಕಾರ್ಯವು ನಡೆಯುವು ದಾಗಿದೆ!

**ಶ್ಯಾಮಲಾದೇವಿ:**—(ಸಸಂಭ್ರಮಳಾಗಿ ಪ್ರವೇಶಿಸಿ) ಭಕ್ತಿಯೇ ಅಂಗ ವನ್ನು ಧರಿಸಿದಂತೆ ಆ ತಪಸ್ವಿಯು ಬರುತ್ತಿದ್ದಾನೆ. ಅಗ್ನ್ಯ ಗಾರವೇ ಅವನಿಂದ ಬೆಳಗುತ್ತಿದೆ. ಮೂರು ಅಗ್ನಿಗಳ ಜೊತೆಗೆ ನಾಲ್ಕನೆಯ ಅಗ್ನಿಯಂತೆ ವಟುವು ತೇಜಸ್ವಿಯಾ ಗಿದ್ದಾನೆ. ಆತನು ಬರುತ್ತಿದ್ದಾನೆ.

**ಯಮಧರ್ಮರಾಜ:**—(ಸಂತೋಷದಿಂದ) ಮ[illegible]ನ ವೈಭವದ ಮುಂಬೆಳಗು!........

**ನಚಿಕೇತ:**—(ಪ್ರವೇಶಿಸಿ) ಪೂಜ್ಯರಿಬ್ಬರಿಗೂ ನಮಸ್ಕರಿಸುವೆನು. (ಪ್ರದಕ್ಷಿಣೆಮಾಡಿ ದಂಡಾಕಾರವಾಗಿ ದೀರ್ಘನಮಸ್ಕಾರಮಾಡುವನು)

**ಯಮಧರ್ಮರಾಜ** :— (ಮಾತುಗಳಿಗೆ ಮೀರಿದ ಮನೋಜ್ಞವಾದ ಪ್ರಫುಲ್ಲಭಾವದಿಂದ ಆಶೀರ್ವದಿಸಿ) ವತ್ಸ ನಚಿಕೇತ! ದಂಡಧರ ನಾದ ನನ್ನ ಕಾಲಪಾಶವನ್ನು ಕಂಡು ನಿನಗೆ ಅಂಜಿಕೆಯಾಗ ಲಿಲ್ಲವೆ? ಇಲ್ಲಿಗೆ ನೀನು ಬಂದಮೇಲೆ ನೀನು ಕಂಡ ಯಮ ದಂಡವು ನಿನ್ನನ್ನು ಭೀತಿಗೊಳಿಸಲಿಲ್ಲವೆ?

**ನಚಿಕೇತ**:—ಪ್ರಭುವೆ! ತಂದೆಯು ದಂಡಧರನಾದರೇನು, ಚಕ್ರ ಧರನಾದರೇನು, ಶೂಲಧರನಾದರೇನು, ವರುಣನಂತೆ ನಾಗ ಪಾಶಧರನಾದರೇನು? ಮಗನಿಗೆ ಭಯವೆ?

**ಯಮಧರ್ಮರಾಜ** :— (ಸಂತೋಷಭರಿತನಾದರೂ, ಪ್ರಶಾಂತವಾದ ಸಮುದ್ರ ಗಾಂಭೀರ್ಯವನ್ನು ಸೂಚಿಸುವ ಮುಖಮುದ್ರೆಯಿಂದ) ಅಪರಿಚಿತನಾದ ನನ್ನಲ್ಲಿ ಇಷ್ಟು ಪ್ರೀತ್ಯಾದರಗಳೆ?

**ನಚಿಕೇತ**:—ಪ್ರಭುವೆ! ನನ್ನಂತಹ ಭಕ್ತರು ನಿನಗೆ ಅಸಂಖ್ಯಾತ ಮಂದಿ. ಆದುದರಿಂದ ನಾನು ನಿನಗೆ ಪರಿಚಿತನಾಗುವಷ್ಟು ಪುಣ್ಯಶಾಲಿಯಾಗಿ ನಿನ್ನ ಗಮನಕ್ಕೆ ಬಾರದಿರಬಹುದು. ಆದರೆ, ನಿನ್ನ ಭಕ್ತರಲ್ಲಿ ಸಮಸ್ತರಿಗೂ ಇರುವವನು ನೀನೊಬ್ಬನೇ ದೈವ. ಆದಕಾರಣ, ಅವರಲ್ಲಿ ಪ್ರತಿಯೊಬ್ಬರ ಚಿತ್ತಭಿತ್ತಿಯಲ್ಲಿಯೂ ನಿನ್ನ ಮೋಹನರೂಪವು ಪ್ರತಿಫಲಿತ ವಾಗಿ ಸುಪ್ರತಿಷ್ಠಿತವಾಗಿದೆ.

**ಶ್ಯಾಮಲಾದೇವಿ**:—(ನಕ್ಕು) ವತ್ಸ! ಏನೆಂದೆ?........ಮೃತ್ಯುವಿನ ರೂಪವು ಮೋಹನರೂಪವೆ?

**ನಚಿಕೇತ**:—[illegible]ಜ್ಞಳಾದ ಮಾತೆಯಲ್ಲಿ ಅಜ್ಞನಾದ ಬಾಲಕನೇನು ಹೇಳಬಲ್ಲನು

**ಯಮಧರ್ಮರಾಜ**:—ಮೂರು ದಿನಗಳ ಕಾಲ ನಿನ್ನನ್ನು ಬಳಲಿಸಿ ದೆನು. ನಿನ್ನಂತಹ ಅತಿಥಿಯನ್ನು ಆದರಿಸದ ಪಾತಕದ

ಪ್ರಾಯಶ್ಚಿತ್ತರೂಪವಾಗಿ ನಿನಗೆ ಮೂರು ವರಗಳನ್ನು ಕೊಡುವೆನು.

**ನಚಿಕೇತ:**—ಪ್ರೀತಿಭಕ್ತಿಗಳು ಪ್ರಾರ್ಥಿಸುವುದು ಅನುಗ್ರಹವನ್ನು. ಪಣ್ಯರೂಪದ ಪ್ರತಿಫಲವನ್ನಲ್ಲ.

**ಯಮಧರ್ಮರಾಜ:**—ಮೆಚ್ಚಿಕೆಯನ್ನು ಬೇಡವೆಂದು ತಿರಸ್ಕರಿಸಿ ಅಪಮಾನಮಾಡುವುದು ಭಕ್ತಿಲಕ್ಷಣವಲ್ಲ.

**ನಚಿಕೇತ:**—(ಬೆಚ್ಚಿ) ನನ್ನ ದೇವರಿಗೆ ನನ್ನಿಂದ ಅಪಮಾನವೆ!.... ಯಮಧರ್ಮರಾಜ! ನನ್ನ ಅವಿನಯವನ್ನು ಅಪಚಾರವೆನ್ನದೆ ಕ್ಷಮಿಸಿ ಉದ್ಧರಿಸು. ಭಕ್ತನಾಗಿ ಆತ್ಮಾರ್ಪಣ ಮಾಡಿರುವವನಿಗೆ ವರಗಳನ್ನು ಸ್ವೀಕರಿಸಲು ವ್ಯಕ್ತಿತ್ವವೇ ಉಳಿದಿಲ್ಲ. (ದಂಡಪ್ರಣಾಮಮಾಡಿ ಎದ್ದುನಿಲ್ಲುವನು)

**ಯಮಧರ್ಮರಾಜ:**—ಭಕ್ತಿಯನ್ನು ಸ್ವೀಕರಿಸಿದವನು ಕೊಟ್ಟುದನ್ನು ಬೇಡವೆನ್ನಲು ಆತ್ಮಾರ್ಪಣಮಾಡಿರುವ ಭಕ್ತನಿಗೆ ಸ್ವಾತಂತ್ರ್ಯವಿಲ್ಲ.

**ನಚಿಕೇತ:**—ನಾನು ಅಜ್ಞನು, ನೀನು ಪ್ರಾಜ್ಞನು. ನಾನುಮಾಡಿದ ಅಪರಾಧವನ್ನು ಮನ್ನಿಸು. ನೀನು ಅನುಗ್ರಹಿಸಿರುವ ವರಗಳನ್ನು ಸ್ವೀಕರಿಸುವೆನು. ಮೊದಲನೆಯ ವರವಾಗಿ, ನಮ್ಮ ತಂದೆಗೆ ಶಾಂತಿಯನ್ನೂ ವಿವೇಕ ವೈರಾಗ್ಯಗಳನ್ನೂ ಕರುಣಿಸಿ ಕಾಪಾಡು.

**ಯಮಧರ್ಮರಾಜ:**-ನಿಜವಾಗಿಯೂ ನೀನು ಉನ್ಮತ್ತನು. ನಿಮ್ಮ ತಂದೆಯು ನಿನ್ನಲ್ಲಿ ದ್ರೋಹಿ. ಅವನು ನಿನ್ನನ್ನು ಮೃತ್ಯುವಿಗೆ ಅರ್ಪಿಸಿದ್ದಾನೆ. ಅವನು ನಿನಗೆ ಉಪಕಾರಮಾಡಿಲ್ಲ.

**ನಚಿಕೇತ:**—ನನ್ನ ತಂದೆಯು ನನಗೆ ಉಪಕಾರಮಾಡಿಲ್ಲವೆ? ಆತನು ನನಗೆ ಪರಮೋಪಕಾರಿಯು; ಪೂಜ್ಯನು. ವರವನ್ನು ಕರುಣಿಸು.

**ಯಮಧರ್ಮರಾಜ:**-(ನಕ್ಕು) ನೀನು ವಿಲಕ್ಷಣವಟು. ಆಗಲಿ;.... ....ಆತನಿಗೆ ಸ್ವಲ್ಪಮಟ್ಟಿನ ದುಃಖಾನುಭವವಾಗಬೇಕಾಗಿದೆ. ಆ ಬಳಿಕ ಅವನಿಗೆ ಶಾಂತಿಯೂ, ವಿವೇಕ ವೈರಾಗ್ಯಗಳೂ ದೊರೆಯುವುವು.

**ನಚಿಕೇತ:**—ಧನ್ಯನಾದೆನು. ಅಮೃತತ್ವಸಾಧಕವಾಗಿ ಸ್ವರ್ಗ್ಯ ವೆನಿಸಿರುವ ಅಗ್ನಿವಿದ್ಯೆಯನ್ನು ಎರಡನೆಯ ವರವಾಗಿ ಅನು ಗ್ರಹಿಸು.

**ಯಮಧರ್ಮರಾಜ:**—(ಆಶ್ಚರ್ಯಚಕಿತನಾದಂತೆ) ಏನೆಂದೆ ?

**ನಚಿಕೇತ:**—ವಿರಾಡಾತ್ಮತ್ವವನ್ನು ಅನುಭವಮಾಡಿಕೊಡುವ ಅಗ್ನಿ ವಿದ್ಯೆಯನ್ನು ಎರಡನೆಯ ವರವಾಗಿ ಅನುಗ್ರಹಿಸು.

**ಯಮಧರ್ಮರಾಜ:**—(ಪರಿಹಾಸದ ನಗೆಯಿಂದ) ವಟುವೆ, ವಟುವೆ, ಎಳೆಯತನದ ಚಾಪಲ್ಯದಿಂದ ಹಗರಣವನ್ನು ತಂದು ಕೊಳ್ಳುತ್ತಿರುವೆ. ಅಗ್ನಿವಿದ್ಯೆಯ ಅನುಭವವುಂಟಾಯಿತೆಂದರೆ ಆಗಿನ ದೃಶ್ಯವೈಖರಿಯ ದೆಸೆಯಿಂದ ದೇಹಪತನವಾಗುವ ಸಂಭವವೂ ಉಂಟು.

**ನಚಿಕೇತ:**—ಗುರುದೇವ! ಈ ಅಲ್ಪವಿಚಾರಕ್ಕಾಗಿ ಇಷ್ಟು ಮಹತ್ತರ ವಾದ ಶಂಕೆಯನ್ನಿಟ್ಟುಕೊಂಡಿರುವೆಯಾ ? ನನ್ನದೇಹವು ನಷ್ಟವಾದರೆ ನನ್ನ ಆತ್ಮವು ನಿನ್ನ ಪದಕಮಲವನ್ನಾಶ್ರಯಿಸು ವುದು. ಅಗ್ನಿವಿದ್ಯೆಯನ್ನನುಗ್ರಹಿಸು, ಭಗವನ್!

**ಯಮಧರ್ಮರಾಜ:**—(ಸಂತುಷ್ಟನಾಗಿ ನಚಿಕೇತನನ್ನು ತನ್ನಬಳಿಗೆ ಬರಮಾಡಿ ನಿಲ್ಲಿಸಿಕೊಂಡು) ಶ್ರೀಗುರುಭ್ಯೋನಮಃ ಹರಿಃ ಓಂ। ಸಹ ನಾವವತು ಸಹ ನೌ ಭುನಕ್ತು ಸಹವೀರ್ಯಂ ಕರ ವಾವಹೈ। ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾ ವಹೈ॥................ಏಕಾಗ್ರಮನಸ್ಸಿನಿಂದ ಕೇಳು ನಚಿಕೇತ. ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ।

ಹೋತಾರಂ ರತ್ನಧಾತಮಂ|| ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ। ಸ ದೇವಾಂ ಏಹ ವಕ್ಷತಿ || (ಆ ಬಳಿಕ ಕಿವಿಯಲ್ಲಿ ಉಪದೇಶಿಸಿ) ಭಕ್ತಿಯಿಂದೊಡಗೂಡಿ ಮುಗಿದ ಕಣ್ಣುಗಳಿಂದ ಮುಗಿಲಿನಕಡೆಗೆ ನೋಡು ವಿರಾಡಾತ್ಮತ್ವವನ್ನು ಕರತಲಾಮಲಕ ಮಾಡಿಕೊಡುವ ಅಗ್ನಿವಿದ್ಯೆಯ ಅಖಂಡ ವೈಭವವನ್ನು ಜ್ಞಾನನೇತ್ರದಿಂದ ನೋಡಿ ಕೃತಾರ್ಥನಾಗು. ತೇಜಸ್ವಿಯಾದ ವಟುವೆ! ಏನನ್ನು ನೋಡುತ್ತಿರುವೆ?

**ನಚಿಕೇತ:**—(ಕಣ್ಣುಗಳನ್ನು ಮುಚ್ಚಿಕೊಂಡೇ ಇದ್ದು) ಅನಿರ್ವಚನೀಯವಾದ ಆನಂದಮಯ ದೃಶ್ಯ. ಗುರುದೇವ! ಜಗತ್ತೇ ಜಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತಿದೆ. ಎಲ್ಲಿನೋಡಿದರೂ ಅಗ್ನಿದೇವನ ವೈಭವ ವಿಭೂತಿಗಳೇ. ಸೂರ್ಯರೂಪದಿಂದಲೂ, ವಿದ್ಯುತ್ತಿನ ರೂಪದಿಂದಲೂ, ಜ್ವಾಲಾ ರೂಪದಿಂದಲೂ, ಭಗವಾನ್ ಅಗ್ನಿದೇವನು ರಾರಾಜಿಸುತ್ತಿದ್ದಾನೆ. ಇದೇನಿದು? ಮಧ್ಯದಲ್ಲಿ ನಮ್ಮ ತಾಯಿ. ನಮ್ಮ ತಂದೆ. ನಮ್ಮ ಆಚಾರ್ಯ ವಾಮದೇವರು. ಅವರಿಗೂ ಮೇಲ್ಭಾಗದಲ್ಲಿ ಭಗವಾನ್ ಯಮ ಧರ್ಮರಾಜ.

**ಯಮಧರ್ಮರಾಜ:**—ಭೇದಿಸಿ ನೋಡು ಆ ಸಮಸ್ಯೆಯನ್ನು. ಕಾಲವಿಳಂಬಕ್ಕೆ ಅವಕಾಶವಿಲ್ಲ.

**ನಚಿಕೇತ:**—ತ್ರೇತಾಗ್ನಿಗಳ ಸ್ವರೂಪ ರಹಸ್ಯವಲ್ಲವೇ ಇದು! ಮಾತೃಸ್ವರೂಪ ದಕ್ಷಿಣಾಗ್ನಿ, ಪಿತೃಸ್ವರೂಪ ಗಾರ್ಹಪತ್ಯಾಗ್ನಿ, ಆಚಾರ್ಯ ಸ್ವರೂಪ ಆಹವನೀಯಾಗ್ನಿ!* ಆದುದರಿಂದಲೇ ಆ ಮೂರು ಸ್ಥಾನಗಳಲ್ಲಿ ನನ್ನ ಮಾತಾಪಿತೃಗಳ ಮತ್ತು ಪೂಜ್ಯ ಗುರುದೇವರುಗಳ ಉಜ್ಜ್ವಲ ಪ್ರತಿಬಿಂಬಗಳು

---

* "ಪಿತಾ ವೈ ಗಾರ್ಹಪತ್ಯೋಽಗ್ನಿ ರ್ಮಾತಾಗ್ನಿರ್ದಕ್ಷಿಣಃ ಸ್ಮೃತಃ।
ಗುರುರಾಹವನೀಯಸ್ತು ಸಾಗ್ನಿತ್ರೇತಾಗರೀಯಸೀ" ||

ಗೋಚರಿಸಿದುದು. ಗುರುದೇವ! ಅಗ್ನಿಯು ಜೀವನಸರ್ವಸ್ವ ನೆಂಬುದು ನಿನ್ನ ಅನುಗ್ರಹದಿಂದ ಗೋಚರವಾಯಿತು.

**ಯಮಧರ್ಮರಾಜ:**—(ಆನಂದಬಾಷ್ಪವನ್ನು ಸುರಿಸುತ್ತ ನಚಿಕೇತ ನನ್ನು ಆಲಿಂಗಿಸಿ) ನನ್ನ ಪ್ರೇಮಪುತ್ರನೆ! ಕಣ್ಣುಗಳನ್ನು ತೆರೆ. ಅನೇಕ ಜನ್ಮಗಳ ಪುಣ್ಯಪರಿಪಾಕದ ಪರಿಣಾಮವಾಗಿ ಸಜೀವನಾಗಿಯೇ ನೀನು ಈ ದೃಶ್ಯವನ್ನು ನೋಡಿ ಅಗ್ನಿ ವಿದ್ಯಾ ಸಾಕ್ಷಾತ್ಕಾರವನ್ನು ಪಡೆದೆ. ನಿನ್ನಂತಹ ಸಚ್ಛಿಷ್ಯನು ದೊರೆತಾನೇ ಎಂದು ನಾನು ನಿರೀಕ್ಷಿಸಿಕೊಂಡಿದ್ದೆನು. ನಾನು ಧನ್ಯನಾದುದೂ ಈ ಅಗ್ನಿವಿದ್ಯೆಯ ಸಾಕ್ಷಾತ್ಕಾರದಿಂದಲೇ.

**ನಚಿಕೇತ:**—(ಕಣ್ದೆರೆದು ಪ್ರದಕ್ಷಿಣೆಮಾಡಿ ನಮಸ್ಕರಿಸಿ) ದಯಾಮಯ ನಾದ ಗುರುದೇವ! ನಿನ್ನ ಕರುಣೆಯು ಅಪಾರವಾದುದು.

**ಯಮಧರ್ಮರಾಜ:**—ವತ್ಸ! ಅಗ್ನಿವಿದ್ಯೆಯನ್ನು ಬಯಸಿದವರೇ ವಿರಳ. ಬಯಸಿದವರಲ್ಲಿಯೂ ನಿನ್ನಷ್ಟು ತೀವ್ರವಾಗಿ ಗ್ರಹಿಸಿ ದವರಂತು ಮತ್ತೂ ವಿರಳ. ಹಾಗೆ ಗ್ರಹಿಸಿದವರ ಗುಂಪಿನಲ್ಲಿ (ಆನಂದಾಧಿಕ್ಯದ ಮದಾಲಸಭಾವದಿಂದ) ಸ್ವಾರ್ಥಸಾಧನೆಯ ಲವಲೇಶವೂ ಇಲ್ಲದೆ ಲೋಕೋದ್ಧಾರಕ್ಕಾಗಿ ಮಾತ್ರವೇ ಅಗ್ನಿವಿದ್ಯೆಯನ್ನಾರ್ಜಿಸಬೇಕೆಂದವನು ಒಬ್ಬನೇ ಒಬ್ಬನು. ಅವನು (ಆದರದಿಂದ ಅವನ ಭುಜದಮೇಲೆ ಕೈಯಿಟ್ಟು) ನಮ್ಮ ನಚಿಕೇತ. ವತ್ಸ! ಈ ಅಗ್ನಿವಿದ್ಯೆಯು ನಿನ್ನ ನಾಮಾಂಕಿತದಿಂದ ನಾಚಿಕೇತಾಗ್ನಿಯೆಂದು ಶೋಭಿಸಲಿ! ನಾಚಿಕೇತಾಗ್ನಿಯೆಂಬ ಹೆಸರು ಸುಪ್ರಸಿದ್ಧವಾಗಿ ಶಾಶ್ವತವಾಗಿ ಬೆಳಗಲಿ! ಇನ್ನು ಮೂರನೆಯ ವರವನ್ನು ಕೇಳು.

**ನಚಿಕೇತ:**—ಅನುಗೃಹೀತನಾದೆನು. ಮೂರನೆಯ ವರವಾಗಿ ಆತ್ಮ ವಿದ್ಯೆಯನ್ನನುಗ್ರಹಿಸು. ಮಾನವನು ಮೃತಪಟ್ಟಮೇಲೆ

ಅಸ್ತಿತ್ವವುಂಟೆಂದು ಕೆಲವರೂ, ಇಲ್ಲವೆಂದು ಕೆಲವರೂ ಹೇಳುತ್ತ, ವಾದಪ್ರತಿವಾದಗಳನ್ನು ಮಾಡುತ್ತಿರುವರು. ದೇಹಾತೀತವಸ್ತುವಿನ ನಿಜಸ್ವಭಾವವನ್ನು ತಿಳಿಸಿ ಉದ್ಧರಿಸು.

**ಯಮಧರ್ಮರಾಜ**:—ದೇವತೆಗಳೂ ಸಂದೇಹಗ್ರಸ್ತರಾಗಿರುವ ಈ ವಿಚಾರವನ್ನು ಕೇಳಬೇಡ.

**ನಚಿಕೇತ**:—(ನಗುತ್ತ) ನಾನು ವಜ್ರಧರನಾದ ಇಂದ್ರನನ್ನು ಆರಾಧಿಸಲು ಬಂದಿಲ್ಲ. ದೈವಸ್ವರೂಪಿ ಸ್ವಯಂ ದಂಡಧರನನ್ನು ಮರೆಹೊಕ್ಕು ಬಂದಿದ್ದೇನೆ.

**ಶ್ಯಾಮಲಾದೇವಿ**:—ಈತನು ಬಾಲಕನಾದರೂ ಮಹರ್ಷಿಗಳನ್ನೂ ಮೀರಿಸಿದ್ದಾನೆ. (ನಚಿಕೇತನು ತಲೆಬಾಗಿ ವಂದಿಸಿ ಕೈಮುಗಿಯುವನು.)

**ಯಮಧರ್ಮರಾಜ**:—(ಮೈದಡವಿ) ವತ್ಸ! ಈ ರಹಸ್ಯವು ನಿನಗೆ ಬೇಡ. (ತನ್ನ ಕೊರಳಿನಲ್ಲಿರುವ ರತ್ನಹಾರವನ್ನು ತೋರಿಸಿ) ಇದು ನೀನು ಕೋರಿದೆಡೆಗೆ ಕರೆದೊಯ್ದು ನೀನು ಬಯಸಿದ ಭೋಗಗಳನ್ನು ಕೊಡುವ ಸರ್ವಾರ್ಥ ಸಿದ್ಧಿಪ್ರದವಾದ ಜೀವರತ್ನ ಮಾಲೆ. ಇದನ್ನು ಕೊಡುವೆನು. ಆತ್ಮವಿದ್ಯೆಯನ್ನು ಮಾತ್ರ ಬಯಸಬೇಡ.

**ನಚಿಕೇತ**:—ದೇವ! ಭಕ್ತಿಯಿಂದ ಬಿನ್ನವಿಸುವೆನು. ನೀನು ಕರುಣಿಸಿರುವ ಪ್ರೇಮವಾತ್ಸಲ್ಯಗಳ ಅಮೂಲ್ಯ ಮಾಲಿಕೆಯೊಂದೇ ನನಗೆ ಸಾಕು. ಈ ಜೀವರತ್ನಮಾಲಿಕೆಯನ್ನು ನಿನ್ನ ಕಂಠವೇ ಬೆಳಗಿಸಲಿ. ಅದು ನಿನ್ನ ಕಂಠದಲ್ಲಿಯೇ ಬೆಳಗಲಿ. ನನಗೆ ಆತ್ಮವಿದ್ಯೆಯನ್ನು ಕರುಣಿಸು.

**ಯಮಧರ್ಮರಾಜ**:—ವತ್ಸ! ಮಕ್ಕಳು ಮೊಮ್ಮಕ್ಕಳನ್ನು ಕೇಳು. ಧನಕನಕ ವಸ್ತುವಾಹನಾದಿಗಳನ್ನು ಕೇಳು. ರಾಜ್ಯವನ್ನು

ಕೇಳು. ನೃತ್ಯಗೀತಾದಿಗಳನ್ನು ಕೇಳು. ಅನಂತ ಭೋಗವನ್ನೂ ದೀರ್ಘಾಯುಸ್ಸನ್ನೂ ಬೇಡು. ಆತ್ಮವಿದ್ಯೆಯ ರಹಸ್ಯವನ್ನು ಮಾತ್ರ ಕೇಳಬೇಡ.

**ನಚಿಕೇತ**:—ಅಶಾಶ್ವತವಾದ ಅವುಗಳೊಂದೂ ಬೇಡ. ನೀನು ಯಾಮ್ಯಪಟ್ಟವನ್ನು ವಹಿಸಿ ಆಳುತ್ತಿರುವಲ್ಲಿ, ನಿನ್ನ ಆಶ್ರಿತರಿಗೆ ಧನಕನಕ ಮುಂತಾದ ಧರ್ಮಾವಿರುದ್ಧ ಭೋಗಸಾಮಗ್ರಿಗಳಿಗೆ ಕೊರತೆಯೆ ? ಈ ಶರೀರವನ್ನು ಬಳೆಯಿಸಿದ ಮಾತಾಪಿತೃಗಳಿಂದ ಸತ್ಪಾತ್ರದಲ್ಲಿ ದಾನವಾಗಿ ಸಮರ್ಪಿತನಾಗಿರುವೆನು. ಮನೋಬುದ್ಧಿಗಳನ್ನು ಬಳೆಯಿಸಿ ಉದ್ಧರಿಸುವ ಮಾತಾಪಿತೃಗಳ ಬಳಿಗೆ ಬಂದಿರುವೆನು. ತಮ್ಮ ಚಿತ್ತವೇ ನನ್ನ ಭಾಗ್ಯ. ಕೊಟ್ಟ ವರವೇ ಇಲ್ಲವಾದರೆ ಅದು ನನ್ನ ಪಾಪಶೇಷ. (**ಉಜ್ಜ್ವಲವಾದ ಹೊಂಬಣ್ಣದ ಬೆಳಕು ಬೀಳುವುದು**) ಇದೇನಿದು ಈ ಸುವರ್ಣಛಾಯೆಯ ಬೆಳಕು ?

**ಯಮಧರ್ಮರಾಜ**:—ಅಗ್ನಿವಿದ್ಯೆಯ ಫಲವಾಗಿ ಲೋಕಾಲೋಕದರ್ಶನ ಯೋಗವು ಲಭಿಸಿರುವುದು. ಇದು ವಿಮಾನ ಪ್ರಭೆ. (**ನೇಪಥ್ಯದ ಕಡೆಗೆ ತೋರಿಸಿ**) ಅದೋ! ವಿಮಾನವು ಸಿದ್ಧವಾಗಿರುವುದು. ಅದನ್ನೇರಿ ಹೋಗೋಣ ನಡೆ. ಲೋಕಲೋಕಗಳನ್ನೂ ಸಂಚರಿಸಿ ಬಂದಮೇಲೆ ನೀನಾವ ಭೋಗಭಾಗ್ಯಗಳನ್ನು ಬಯಸಿದರೂ ಕೊಡುವೆನು. ಅಸಾಧ್ಯವಾದ ಮತ್ತು ಅದೇಯವಾದ ಬ್ರಹ್ಮವಿದ್ಯೆಯ ಬಯಕೆಯನ್ನು ಮಾತ್ರ ಬಿಟ್ಟುಬಿಡು.

**ನಚಿಕೇತ**:—ಪ್ರೇಮ ಸರಣಿಯು ಪರಿಪಕ್ವವಾದರೆ ಅಸಾಧ್ಯವೂ ಸಾಧ್ಯವಾಗುವ ಭಾಗ್ಯವು ಬಂದೇ ಬರುವುದು. (**ಸ್ತೋತ್ರ ಮಾಡಿ ನಮಸ್ಕರಿಸುವನು.**)

(**ತೆರೆಯು ಬೀಳುವುದು**)

---

## ದೃಶ್ಯ ೪

[ಯಮಧರ್ಮರಾಜನ ಸೌಧದಲ್ಲಿ ಅವನ ಅಂತಃಪುರದ ಮಾರ್ಗ. ಛತ್ರಚಾಮರಗಳನ್ನೂ ಸುವರ್ಣವೇತ್ರಗಳನ್ನೂ ಹಿಡಿದ ಸೇವಕರು ಮುಂದೆ ಹೋದಬಳಿಕ ಯಮನು ಪ್ರವೇಶಿಸುವನು. ನಚಿಕೇತನು ಅವನಿಗೆ ಸ್ವಲ್ಪ ದೂರದಲ್ಲಿ ಅವನ ಹಿಂದೆ ಬರುತ್ತಿರುವನು. ಒಂದೆರಡು ಹೆಜ್ಜೆಗಳನ್ನಿಟ್ಟು ಆಬಳಿಕ ಆಲೋಚನಾಮಗ್ನನಾಗಿ ನಿಲ್ಲುವನು.]

**ಯಮಧರ್ಮರಾಜ:**—(ಸ್ವಗತ) ಶಿಷ್ಯ ಪ್ರತಿಗ್ರಹವು ಅತಿ ಕಷ್ಟವಾದುದು. ಶಿಷ್ಯನನ್ನು ಗುರುವೂ ಗುರುವನ್ನು ಶಿಷ್ಯನೂ ಪರೀಕ್ಷಿಸಿದಲ್ಲದೆ ಅನುಬಂಧವನ್ನೇ ಇಟ್ಟುಕೊಳ್ಳಲಾಗದು. ನಾನಾ ಲೋಕಗಳನ್ನೂ ನೋಡಿ, ಜ್ಞಾನವೃದ್ಧರಾದ ಮಹನೀಯರ ಸಂದರ್ಶನ ಪಡೆದುದರಿಂದ ನಚಿಕೇತನ ಶಾಸ್ತ್ರವಾಸನೆಯು ಪರಿಹಾರವಾಯಿತು. ವಿದ್ಯೆಯು ಅಪಾರವಾದುದೆಂಬ ಭಾವನೆಯು ರೂಢಮೂಲವಾಯಿತು. ಪದವಿಪ್ರತಿಷ್ಠೆಗಳೂ ಐಹಿಕ ಸುಖವೂ, ನಶ್ವರವೆಂದು ನಂಬಿಕೆಯುಂಟಾಗಿ ಅವನ ಲೋಕವಾಸನೆಯೂ ನಿವಾರಣೆಯಾಯಿತು. ದೇಹವಾಸನೆಯು ನಶಿಸಿದೆಯೇ ಇಲ್ಲವೇ-ಎಂಬ ಕಠೋರ ಪರೀಕ್ಷೆಯು ಇನ್ನು ನಡೆಯಬೇಕಾಗಿದೆ. ಆ ಬಳಿಕ ಪರಾವಿದ್ಯೆಯ ಪ್ರೇಮದಾನ.

**ನಚಿಕೇತ:**—(ಯಮಧರ್ಮರಾಜನ ಸಮೀಪಕ್ಕೆ ಬಂದು) ಯಮಧರ್ಮರಾಜ! ನಿನ್ನ ಕೃಪೆಯಿಂದ ನಾನಾ ಲೋಕಗಳನ್ನೂ ನೋಡಿ ಬಂದೆ. ಒಂದೊಂದು ಲೋಕದ ವೈಭವಗಳೂ ಒಂದೊಂದು ಬಗೆ. ಲೋಕಾನುಭವದ ತಳಹದಿಯಮೇಲೆ ನಿಂತಿಲ್ಲದ ವಿವೇಕ ವೈರಾಗ್ಯಗಳು ರೂಢಮೂಲವಲ್ಲವೆಂದು ಪ್ರಾಜ್ಞರು ಹೇಳುವರು. ಕರುಣಾಳುವೆ! ನನ್ನಲ್ಲಿ ಕೃಪೆಮಾಡಿ ಅತ್ಯಲ್ಪ ಕಾಲದಲ್ಲಿಯೇ ಅಪಾರವಾದ ಅನುಭವವನ್ನು ದೊರೆಯಿಸಿದೆ.

**ಯಮಧರ್ಮರಾಜ**:—ಅವುಗಳಲ್ಲಿ ಯಾವ ಲೋಕದ ಭೋಗ ಭಾಗ್ಯಗಳನ್ನನುಭವಿಸಲು ನಿನಗಿಷ್ಟವೋ ತಿಳಿಸು. ಅವಶ್ಯವಾಗಿ ನೆರವೇರಿಸಿಕೊಡುವೆನು.

**ನಚಿಕೇತ**:—ನನ್ನ ಮನಸ್ಸು ದುಃಖದಿಂದ ತುಂಬಿದೆ. ಹಿರಣ್ಯಗರ್ಭನ ಸೃಷ್ಟಿ ವೈಭವವನ್ನು ಅನುಭವಿಸುತ್ತಿದ್ದರೂ ಅನೇಕರು ಅವನನ್ನು ಸ್ಮರಿಸುವುದಿಲ್ಲವಲ್ಲಾ ಎಂದು ಸಂಕಟಪಡುತ್ತಿದ್ದೇನೆ. ಭೂಲೋಕವು ಎಷ್ಟು ದುಃಖಮಯ! ಹಿರಣ್ಯಗರ್ಭನು ಅನುಗ್ರಹಿಸಿ, ನನ್ನ ದೇಹವನ್ನೇ ಮೂಲ್ಯವಾಗಿ ಸ್ವೀಕರಿಸಿ ಪ್ರಪಂಚದಲ್ಲಿರುವ ಅಜ್ಞಾನವನ್ನೂ, ದುಃಖವನ್ನೂ ನಿವಾರಣೆಮಾಡುವುದಾದರೆ, ನಾನು ಸಂತೋಷದಿಂದ ಸಾವಿಗೂ ಸಿದ್ಧವಾಗಿದ್ದೇನೆ. ದೇವ! ನನಗೆ ಆತ್ಮವಿದ್ಯೆಯನ್ನು ಬೋಧಿಸಿ, ಹಿರಣ್ಯಗರ್ಭನ ಸಾಕ್ಷಾತ್ಕಾರಕ್ಕೆ ಅಧಿಕಾರವನ್ನು ಕರುಣಿಸು.

**ಯಮಧರ್ಮರಾಜ**:—ನಚಿಕೇತ, ಆತ್ಮವಿದ್ಯೆಯ ಆಶೆಯನ್ನು ಬಿಡು.

**ನಚಿಕೇತ**:—ನಾನು ನನ್ನ ಉದ್ಧಾರಕ್ಕಾಗಿ ಮಾತ್ರವೇ ಅದನ್ನಾಶಿಸುವುದಿಲ್ಲ. ಅಜ್ಞಾನಾಂಧಕಾರದಲ್ಲಿ ಮಗ್ನರಾಗಿರುವ ನನ್ನಂತಹ ಅನೇಕರಿಗೆ ಜ್ಞಾನಜ್ಯೋತಿಯ ಸಾಕ್ಷಾತ್ಕಾರವಾಗುವುದಕ್ಕಾಗಿ ಅದನ್ನು ಬಯಸುವೆನು. ಕೃಪಾನಿಧಿಯಾದ ನೀನು ಕರುಣಿಸಬೇಕು.

**ಯಮಧರ್ಮರಾಜ**:—ಲೋಕಭರಣವು ನಚಿಕೇತನಿಗೆ ಸೇರಿಲ್ಲ.

**ನಚಿಕೇತ**:—ಪ್ರಭುವೆ! ನಚಿಕೇತನೂ ಅದನ್ನು ಬಲ್ಲನು.

**ಯಮಧರ್ಮರಾಜ**:—ಅನೇಕ ದೇವತೆಗಳಿಗೂ ಅಗೋಚರವಾಗಿರುವುದನ್ನರಿಯಲು ಮರ್ತ್ಯನಿಗೆ ಅಧಿಕಾರವಿಲ್ಲ.

**ನಚಿಕೇತ**:—ದೇವ! ಇತರರೆದುರಿಗೆ ಮಾತ್ರ ಈ ರೀತಿ ನುಡಿಯಬೇಡ. ನಿನ್ನ ಅಪಮಾನವನ್ನು ಸಹಿಸಲು ನನಗೆ ಶಕ್ಯವಿಲ್ಲ.

**ಯಮಧರ್ಮರಾಜ**:-(ವಿಸ್ಮಯದಿಂದ ನಕ್ಕು) ನನಗೆ ಅಪಮಾನವೆ? ಅದು ಹೇಗೆ?

**ನಚಿಕೇತ**:—ದೇವ! ದೇಹಪಾತವಾದಮೇಲೆ ದೇವತ್ವವನ್ನು ಪಡೆದ ಆದಿಮನುಜನಲ್ಲವೇ ನೀನು? ನೀನೇ ಮನುಷ್ಯರನ್ನು ಅವಹೇಳನಮಾಡಿ ಮಾನವ್ಯತೆಗೆ ಅಪಮಾನ ಮಾಡಿದರೆ, ತಾನೇ ಒಮ್ಮೆ ಮರ್ತ್ಯನಾಗಿದ್ದವನು ತನ್ನ ಕುಲಬಾಂಧವರನ್ನೇ ತಿರಸ್ಕರಿಸಿದನೆಂದು ಕೆಲವರು ಅಪಹಾಸ್ಯ ಮಾಡಬಹುದು. ನಿನ್ನ ಅಪಮಾನದ ದುಃಖವನ್ನು ನಾನು ಸೈರಿಸೆನು.

**ಯಮಧರ್ಮರಾಜ**:—(ನಚಿಕೇತನು ಕಾಣದಂತೆ ಹಿಗ್ಗಿ ಆ ಬಳಿಕ ದರ್ಪದಿಂದ) ನಚಿಕೇತ! ನಾನು ಮಾನವ್ಯತೆಯನ್ನು ತಿರಸ್ಕರಿಸಲಿಲ್ಲ. ಅವಿಚಾರಿಯಾಗಿ ಮಾತನಾಡಬೇಡ. ದಂಡಧರನೆದುರಿಗೆ ನಿರ್ಭಯವಾಗಿ ನಿಂತು ವಾದಿಸಿದವರಿಲ್ಲ.

**ನಚಿಕೇತ**:-ಪ್ರೀತಿಭಾಸ್ಕರನುದಯಿಸಿದರೆ ಭೀತಿ ತಮಸ್ಸು ಪಲಾಯನವಾಗುವುದು. ಭಕ್ತನಿಗೆ ಭಯವೆಲ್ಲಿಯದು?

**ಯಮಧರ್ಮರಾಜ**:--ಆತ್ಮವಿದ್ಯೆಗೆ ನೀನಿನ್ನೂ ಅನಧಿಕಾರಿ. ಆದುದರಿಂದಲೇ ಹಿರಣ್ಯಗರ್ಭ ಸಂದರ್ಶನಭಾಗ್ಯವು ನಿನಗೆ ಲಭಿಸಲಿಲ್ಲ.

**ನಚಿಕೇತ**:--ವಿರಾಡಾತ್ಮತ್ವವನ್ನೀಯುವ ಅಗ್ನಿವಿದ್ಯೆಯೂ, ಮೋಕ್ಷಾಗಾರದ ಕವಾಟವನ್ನು ತೆರೆದಿಡುವ ಬ್ರಹ್ಮಸಾಕ್ಷಾತ್ಕಾರವೂ ನಿನ್ನನ್ನು ಆಶ್ರಯಿಸಿವೆ. ಅವುಗಳೇ ವಶವರ್ತಿಗಳಾಗಿ ಓಲೈಸುತ್ತಿರುವ ಸ್ವಯಂ ಯಮಧರ್ಮರಾಜನ ಅನುಗ್ರಹಕ್ಕೆ ಪಾತ್ರನಾದ ನಾನು ಅನಧಿಕಾರಿಯೆ?

**ಯಮಧರ್ಮರಾಜ**:--ಆ "ನಾನು, ನಾನು" ಎಂಬ ಅಹಂಭಾವವೇ ನಿನ್ನ ಅನರ್ಹತೆಯನ್ನು ಸೂಚಿಸುವುದು. ಮಮಕಾರವೇ ಮೋಹಶೃಂಖಲೆಗೊಳಗುಮಾಡುವ ಸಾಮಗ್ರಿ ವಿಶೇಷ. ತಂದೆ

ಗಾಗಿ ವರವನ್ನು ಬೇಡಿದೆಯೇ ಹೊರತು, ಗುರುವಾದ ವಾಮ
ದೇವನಿಗಾಗಿ ಏನನ್ನೂ ಕೇಳಲಿಲ್ಲ.

**ನಚಿಕೇತ**—ಆ ತೇಜೋರಾಶಿಗೆ ಮಿಣುಕು ಹುಳುವಾದ ನನ್ನಿಂದ ಯಾವ ಸೇವೆಯೂ ಸಾಧ್ಯವಿಲ್ಲ. ಪ್ರಭುವೆ! ನನ್ನಿಂದ ತಂದೆಗಾಗಿ ವರವನ್ನು ಬೇಡಿಸಿದುದು ಸ್ವಾರ್ಥಪರತೆಯ ಮಮಕಾರವಲ್ಲ. ಪ್ರಾಣಿಮಾತ್ರಕ್ಕೆ ಸಲ್ಲಬೇಕಾದ ಪ್ರೀತಿ ಮಮತೆಗಳಿಂದ ಕೂಡಿ, ಆತನಿಗಾಗಿ ನಾನು ಶಾಂತಿ ಭಿಕ್ಷೆಯನ್ನು ಬೇಡಿದೆನು. ನಾನು ಅನಧಿಕಾರಿಯೆಂದೆಯಲ್ಲವೆ? ನಾನು ಅಧಿಕಾರಸಿದ್ಧಿಯನ್ನು ಪಡೆದೇ ಪಡೆಯುವೆನು.

**ಯಮಧರ್ಮರಾಜ:**—ಅದನ್ನು ನಾನೂ ನೋಡುವೆನು....ಇರಲಿ. ನೀನು ಯಮಲೋಕ ವೈಭವಗಳನ್ನು ನೋಡಬೇಕೆಂದು ಬಯಸಿದೆ. ನೋಡಿ ಬಾ. ಆದರೆ, ನಾನು ಆಗಲೇ ಸೂಚಿಸಿರುವ ಪರಿಮಿತಿಯನ್ನು ಮೀರಕೂಡದು. ಜೋಕೆ. ನೀನು ಆ ಪರಿಮಿತಿಯನ್ನು ಮೀರಿ ಮುಂದಕ್ಕೇನಾದರೂ ಹೋದರೆ ಕ್ರೂರ ದಂಡನೆಗೆ ಗುರಿಯಾಗುವೆ.

(ಇಬ್ಬರೂ ಹೋಗುವರು.)

---

## ದೃಶ್ಯ ೫

[ಯಮಲೋಕದಲ್ಲಿ ವಧ್ಯಭೂಮಿಯಂತಿರುವ ಬಯಲಿನ ಬಳಿಗೆ ಹೋಗುವ ಮಾರ್ಗ. ಚಿತ್ರಗುಪ್ತನು ಉದ್ದವಾದೊಂದು ಚಿನ್ನದ ಸರಪಣಿಯನ್ನು ಕೈಯಲ್ಲಿ ಹಿಡಿದು ಪ್ರವೇಶಿಸುವನು.]

**ಚಿತ್ರಗುಪ್ತ:**—(ನೇಪಥ್ಯದ ಕಡೆಗೆ ನೋಡಿ) ನಚಿಕೇತ! ಆಲಸ್ಯ ಮಾಡಬೇಡ. ಶೀಘ್ರವಾಗಿ, ಬಾ.

**ನಚಿಕೇತ:**—(ಪ್ರವೇಶಿಸಿ) ಕರುಣಾಳುವೆ, ಇದೋ ಬಂದೆನು.

**ಚಿತ್ರಗುಪ್ತ:**—ಯಮಧರ್ಮರಾಜನು ಬೇಡವೆಂದ ಸ್ಥಳಕ್ಕೆ ನೀನು ಹೋದೆ. ಅದರ ಫಲವಾಗಿ ನಾನು ನಿನಗೆ ಅತಿಕ್ರೂರವಾದ ದಂಡನೆಗಳನ್ನು ವಿಧಿಸುತ್ತಿದ್ದೇನೆ. ಘೋರವಾದ ಯಾತನೆಗಳಿಗೆ ಗುರಿಮಾಡುತ್ತಿದ್ದೇನೆ. ಹೀಗಿದ್ದೂ ನನ್ನನ್ನು ಕರುಣಾಳುವೆನ್ನುವೆ? ಇದೇನು ಪರಿಹಾಸವೊ?

**ನಚಿಕೇತ:**—ಪೂಜ್ಯನೆ! ಹಾಗಲ್ಲ. ನಿನ್ನ ಸೇವಾಧರ್ಮವು ನಿನ್ನಿಂದ ಆ ರೀತಿ ಮಾಡಿಸುತ್ತಿದೆ. ಇಲ್ಲವಾದರೆ ನೀನು ಕರುಣಾಳುವಾಗಿಯೇ ಇರುತ್ತಿದ್ದೆ.

**ಚಿತ್ರಗುಪ್ತ:**—ಹಾಗಾದರೆ ನನ್ನ ಪ್ರಭುವಾದ ಯಮಧರ್ಮರಾಜನು ಕರುಣಾಳುವಲ್ಲವೆಂಬುದೋ ನಿನ್ನ ಅರ್ಥ?

**ನಚಿಕೇತ:**—ಶಾಂತಂ ಪಾಪಂ, ಶಾಂತಂ, ಪಾಪಂ! ಯಮಧರ್ಮರಾಜನು ನನ್ನ ಗುರುವೆಂದು ಭಾವಿಸಿದ್ದೇನೆ. ಆದರೂ........ ಆದರೂ....(ವಿಷಮಸಂಕಟದ ಪರಿತಾಪದಿಂದ) ನಾನು ನೋಡಿದ ದೃಶ್ಯವು ಮಾಯೆಯ ಕಾವಳದಿಂದಲೋ, ಪಿತ್ತವಿಕಾರದ ಕಳವಳದಿಂದಲೋ ಕಂಡುದಾಗಿರಬಾರದೆ! ನನ್ನ ದೇಶಬಾಂಧವರಿಗೆ ಎಂತಹ ಕ್ರೂರಶಿಕ್ಷೆಗಳು! ಆದಿಮನುಜನಾದ ಯಮಧರ್ಮರಾಜನೇ ಅವುಗಳನ್ನು ವಿಧಿಸುವವನು! ಅಯ್ಯೋ!

**ಚಿತ್ರಗುಪ್ತ**:—ಇದೀಗ ವಿಚಿತ್ರ! ಘೋರವಾದ ಶಿಕ್ಷೆಗಳನ್ನು ಒಂದಾದಮೇಲೆ ಮತ್ತೊಂದರಂತೆ ನೀನೇ ಅನುಭವಿಸುತ್ತಿರುವೆ. ಇತರರು ನರಕದುಃಖವನ್ನನುಭವಿಸುತ್ತಿರುವ ಯಾತನೆಯನ್ನು ನೋಡಿ ಅದು ಮಾಯೆಯ ಕಾವಳದಿಂದಲೋ ಪಿತ್ತವಿಕಾರದಿಂದಲೋ ನೀನು ಕಂಡುದಾಗಿರಬಾರದೆ-ಎಂದು ಬಯಸುತ್ತಿರುವೆ. ಇದೇನು ವಿಚಿತ್ರ!

**ನಚಿಕೇತ**:-ನನ್ನ ಭಾವನೆಯಲ್ಲಿ....ಯಾವ್ಯಪಟ್ಟವೆಂದರೆ....ಧರ್ಮದ ಮೂರ್ತಸ್ವರೂಪನೆನಿಸಿದ ಸಾತ್ವಿಕಶ್ರೇಷ್ಠನಾದ ಯಮಧರ್ಮರಾಜನ ಪ್ರಭುತ್ವವಾಗಿರಬೇಕು. ಆದರೆ * ವಾಸ್ತವಸ್ಥಿತಿಯು ವಿಚಿತ್ರವಾಗಿದೆ.

**ಚಿತ್ರಗುಪ್ತ**:—ಎಂದರೆ?........ಸ್ಪಷ್ಟವಾಗಿ ತಿಳಿಸು.

**ನಚಿಕೇತ**:—ಮೊದಲು ನನ್ನಲ್ಲಿ ವಿಶೇಷವಾಗಿ ಅನುಗ್ರಹವನ್ನು ತೋರಿಸಿದ ಯಮಧರ್ಮರಾಜನು ಈಗ ನನಗೆ ದರ್ಶನವನ್ನೂ ಕರುಣಿಸದೆ, ಈ ರೀತಿ ಕ್ರೂರಶಿಕ್ಷೆಗಳನ್ನು ವಿಧಿಸುತ್ತಿರುವುದೇಕೆ?

**ಚಿತ್ರಗುಪ್ತ**:—ನೀನು ನಿಷಿದ್ಧಪ್ರದೇಶಕ್ಕೆ ನುಗ್ಗಿ ಆಜ್ಞಾಭಂಗ ಮಾಡಿದುದರಿಂದ ಆ ರೀತಿ ಮಾಡಿರಬಹುದು. ಆತನು ಬೇಡವೆಂದಿದ್ದ ಸ್ಥಳಕ್ಕೆ ನೀನು ಹೋದುದೇಕೆ? ನನ್ನನ್ನು ಕುರಿತು ಯಾವುದೊಂದನ್ನೂ ಪ್ರಶ್ನೆಮಾಡಬೇಡ.

**ನಚಿಕೇತ**:—(ವಿನಯಪೂರ್ವಕವಾಗಿ ಕೈಮುಗಿದು) ಪ್ರಿಯಬಂಧುವೆ! ಬೇಸರಿಸಬೇಡ. ದಯಾಳುವೆ! ಎಷ್ಟು ಶಿಕ್ಷೆಯನ್ನು ಬೇಕಾದರೂ ಅನುಭವಿಸುವೆನು. ಆದರೆ, ನನಗಾಗಿ ಒಂದು ಉಪಕಾರಮಾಡುವೆಯಾ? ನಾರಕಿಗಳಾದ ನನ್ನ ದೇಶಬಾಂಧವರು ಅನುಭವಿಸುತ್ತಿರುವ ಸಮಸ್ತ ಶಿಕ್ಷೆಗಳನ್ನೂ

ನನಗೆ ವಿಧಿಸಿ, ಅವರ ಯಾತನೆಯನ್ನು ಕೊನೆಗಾಣಿಸ ಬೇಕೆಂದು ನಾನು ಪ್ರಾರ್ಥಿಸಿದೆನೆಂದು ಯಮಧರ್ಮರಾಜನಿಗೆ ತಿಳಿಸುವೆಯಾ? ಹಿಂಸೆಯನ್ನನುಭವಿಸುವಾಗಿನ ಅವರ ಆರ್ತ ಧ್ವನಿಯನ್ನು ಕೇಳಲಾರದೆ ಅಲ್ಲಿಗೆ ಹೋದೆ. ಆತನು ನಿಷೇಧಿ ಸಿದ್ದರೂ, ನಾನು ಅಲ್ಲಿಗೆ ಹೋದೆ.

**ಚಿತ್ರಗುಪ್ತ**:—(ಸ್ವಗತ) ಎಂತಹ ಪುಣ್ಯಾತ್ಮನಿವನು! (ಪ್ರಕಾಶ) ನಚಿಕೇತ! ವಿಚಿತ್ರವಾದ ಕೋರಿಕೆಯನ್ನು ಸೂಚಿಸುತ್ತಿರುವೆ. ನೀನು ಬದುಕಿದ್ದರಲ್ಲವೇ ಅವರಿಗಾಗಿ ನೀನು ಶಿಕ್ಷೆಯನ್ನನು ಭವಿಸುವುದು! ನೀನೇ ಇಲ್ಲದಬಳಿಕ........

**ನಚಿಕೇತ**:—ಹಾಗೆಂದರೆ?........ಅರ್ಥವಾಗಲಿಲ್ಲ.

**ಚಿತ್ರಗುಪ್ತ**:—ವಧ್ಯಭೂಮಿಯಲ್ಲಿರುವ ಶಿಲಾಸ್ತಂಭಕ್ಕೆ ಈ ಸರಪಳಿ ಯಿಂದ ನಿನ್ನನ್ನು ಬಂಧಿಸಬೇಕೆಂದು ಆಜ್ಞೆಯಾಗಿದೆ. ವಜ್ರ ಧರನಾದ ಇಂದ್ರನು ಮಹಾಬಲಿಷ್ಠನು. ಶೂರಾಗ್ರೇಸರನು. ಅವನಿಗೂ ಸಿಕ್ಕದೆ, ಅವನಿಗೂ ಸಗ್ಗದೆ, ತಪ್ಪಿಸಿಕೊಂಡಿ ರುವ ಅಹಿರಾಜ ಎಂಬ ಘೋರಸರ್ಪವೊಂದಿರುವುದು. ಅದರ ಉಸಿರು ತಗಲಿದರೆ ಪರ್ವತ ಪಙ್ತಿಗಳು ಕರಗಿ ನೀರಾಗುವುವು. ಅದರ ವಿಷಜ್ವಾಲೆಯು ಮತ್ತು ಅದರ ಉಸಿರಿನ ಶಾಖಕ್ಕೆ ಹೋಲಿಸಿದರೆ ಜ್ವಾಲಾಮುಖಿಯ ಜ್ವಾಲಾಜಿಹ್ವೆಯು ಶೀತಲ ವಾದ ಸುಧಾಂಶು ಮಂಡಲಕ್ಕೆ ಸಮಾನ. ಆ ಅಹಿರಾಜನಿಂದ ನಿನ್ನನ್ನು ಕಚ್ಚಿಸಬೇಕೆಂದು ಆಜ್ಞೆಯಾಗಿದೆ.

**ನಚಿಕೇತ**:—ಅದು ಕಚ್ಚಿದರೆ ನಾನು ಸಾಯುವುದು ನಿಜವೆ?

**ಚಿತ್ರಗುಪ್ತ**:—ಇದೀಗ ವಿಚಿತ್ರಪ್ರಶ್ನೆ! ಅದರ ಉಸಿರು ತಗಲಿದರೇ ಪರ್ವತ ಪಙ್ತಿಗಳು ಕರಗಿ ನೀರಾಗುವುವು. ಅದು ಶ್ವಾಸ ಬಂಧನಮಾಡಿ ನಿನ್ನೆಡೆಗೆ ಬಂದು, ಪೂರ್ಣನಿಶ್ವಾಸವನ್ನೂ

ಬಿಟ್ಟು ನಿನ್ನನ್ನು ಕಚ್ಚಲೂಬೇಕೆಂದು ಗೊತ್ತಾಗಿದೆ. ಮತ್ತಾರಿಗೂ ಅಪಾಯವಾಗದಂತೆ ಅದು ಮತ್ತೆ ಶ್ವಾಸಬಂಧನಮಾಡಿ ಹೊರಟುಹೋಗುವಂತೆ ಆಜ್ಞೆಯಾಗಿದೆ. ನಿನ್ನ ಆಯುಃಪರಿಮಿತಿಯಲ್ಲಿ ಇನ್ನು ಕೆಲವು ಕ್ಷಣಗಳು ಮಾತ್ರವೇ ಉಳಿದಿವೆ.

**ನಚಿಕೇತ**:—ಅದು ಕಚ್ಚಿದರೆ ನಾನು ಸಾಯುವುದು ನಿಜವೋ ?

**ಚಿತ್ರಗುಪ್ತ**:—ಇದು ಉನ್ಮತ್ತಾವಸ್ಥೆ.... ನಿಜ........ ನಿಜ........ ನೀನು ಸಾಯುವೆ.

**ನಚಿಕೇತ**—:(ಆನಂದದಿಂದ) ಪರಮೋಪಕಾರ.... ಯಮಧರ್ಮರಾಜ ! ದೇಹಾತೀತ ವಸ್ತುವೊಂದುಂಟೇ ಅಥವಾ ಇಲ್ಲವೇ—ಎಂಬುದನ್ನು ಪ್ರತ್ಯಕ್ಷನಿದರ್ಶನದಿಂದಲೇ ಪರೀಕ್ಷಿಸಿ ನೋಡಿಕೊಳ್ಳಲು ಉತ್ತಮವಾದ ಸನ್ನಿವೇಶವನ್ನೇ ಕಲ್ಪಿಸಿ ಉಪಕಾರ ಮಾಡಿರುವೆ. (ಆಕಾಶದ ಕಡೆಗೆ ಕೈಮುಗಿದು ನಿಲ್ಲುವನು.)

**ಚಿತ್ರಗುಪ್ತ**:—(ಸ್ವಗತ) ಪುಣ್ಯಶ್ಲೋಕನಾದ ಮಹಾನುಭಾವನಲ್ಲವೇ ಈ ವಟುವು !....(ಪ್ರಕಾಶ) ನಚಿಕೇತ ! ವಿಪತ್ತಿನ ಮುಖದಲ್ಲಿ ನಿಂತಿರುವೆ. ಮೂರ್ಖತನವನ್ನೇ ವಿವೇಕವೆಂದು ನಂಬಿ ಮೋಸಹೋಗಬೇಡ. ಸುಕುಮಾರನಾದ ನೀನು ಯಾವ ಭೋಗವನ್ನೂ ಅನುಭವಿಸಿಲ್ಲ. ಈ ದೇಹವನ್ನು ಈಗಲೇ ಕಳೆದುಕೊಳ್ಳಬೇಡ. (ಗದ್ಗದ ಧ್ವನಿಯಿಂದ) ನನ್ನ ಮಾತನ್ನು ಕೇಳು. ಭೂಲೋಕಕ್ಕೆ ಹಿಂತಿರುಗು.

**ನಚಿಕೇತ**:—ನೀನು ಕರುಣಾಳುವೆಂಬುದಕ್ಕೆ ಉತ್ತಮ ನಿದರ್ಶನವು ದೊರೆಯಿತು. ನಿನ್ನ ಗದ್ಗದ ಧ್ವನಿಯೇ ಅದನ್ನು ಸೂಚಿಸಿತು.

**ಚಿತ್ರಗುಪ್ತ**:—(ಸಂತೋಷದಿಂದ) ಭೂಲೋಕಕ್ಕೆ ಹೋಗೋಣವೆ ?

**ನಚಿಕೇತ**:—(ನಕ್ಕು) ನಾನೆಲ್ಲಿ ಹಾಗೆ ಹೇಳಿದೆ ? ಅಲ್ಪವಾದ--ನಶ್ವರವಾದ-ಕ್ಷಣಭಂಗುರವಾದ-ಈ ದೇಹವು ಬಿದ್ದುಹೋಗುವುದು

ನನಗೆ ಪ್ರಿಯಕರವೇ ಆಗಿದೆ. ಮಾಯೆಯ ತೆರೆಯು ಹಾರಿ ಹೋಗುವ ಸುಯೋಗವನ್ನು ಕಳೆದುಕೊಳ್ಳಲೆ?

**ಚಿತ್ರಗುಪ್ತ:**—ವಟು ಚಾಪಲ್ಯದಿಂದ ದುಡುಕಬೇಡ. ನಿನ್ನ ಭಾವನೆಯಲ್ಲಿ ಅಲ್ಪವಾದ ನಿನ್ನ ದೇಹವೇ ಅನರ್ಘ್ಯಭಂಡಾರ ವೆಂದು ಭಾವಿಸಿ ಗೋಳಾಡುತ್ತಿರುವವರಿದ್ದಾರೆ. ಈ ದೇಹವು ಬಿದ್ದುಹೋಗುವುದು ನಿನಗೆ ಪ್ರಿಯಕರವಾಗಿರಬಹುದು. ಈ ನಿನ್ನದೇಹವೇ ಪ್ರಿಯತಮವೆಂದು ಭಾವಿಸಿ ಗೋಳಾಡು ತ್ತಿರುವವರೂ ಇದ್ದಾರೆ. ನಿನಗಾಗಿ ಉನ್ಮತ್ತನಾಗಿರುವ ತಂದೆಯ ಅವಸ್ಥೆಯನ್ನು ನೋಡು. ಕರುಳೇ ಕಿತ್ತುಬರುವಂತೆ ತೋರುವ ಆ ಹುಚ್ಚನ್ನು ನೋಡು. ನಿಮ್ಮತಂದೆಗೆ ಹುಚ್ಚು ಹಿಡಿದಿರುವ ಭಯಾನಕ ದೃಶ್ಯವನ್ನು ನೋಡು. ಸ್ವಾಮಿಯ ಅನುಗ್ರಹವಾಗಿ ನಾನು ಪಡೆದಿರುವ ಯೋಗಬಲದಿಂದ ತೋರಿಸುವೆನು. (ಚಪ್ಪಾಳೆಯನ್ನು ತಟ್ಟುವನು. ತೆರೆಯು ಇಬ್ಬಗೆಯಾಗಿ ವಿಭಾಗವಾಗಿ ಸಿಡಿಲಿನ ಶಬ್ದದೊಡನೆ ಹೊರಟು ಹೋಗುವುದು. ವಾಜಶ್ರವಸನ ಆಶ್ರಮಕ್ಕೆ ಸ್ವಲ್ಪದೂರದಲ್ಲಿರುವ ಅರಣ್ಯವೊಂದು ಕಂಡುಬರುವುದು. ಬೆಳದಿಂಗಳಿನ ರಾತ್ರಿ. ಕಾವಳದ ತೆರೆಯಲ್ಲಿ ಅರೆವಾಸಿಯಾಗಿ—ಮಸಕು ಮಸಕಾಗಿ—ಕಾಣುತ್ತಿರುವ ತರುಗುಲ್ಮಲತಾರಾಜಿಗಳು. ಪ್ರಾಕೃತಿಕ ದೃಶ್ಯವೇ ವಿಷಾದ ಸಂಮಿಶ್ರಿತ ವಾದ ವಿಷಣ್ಣತೆಯನ್ನೈದಿದೆಯೋ-ಎಂಬಂತೆ ತೋರುವಷ್ಟು ಗಭೀರ ವಾಗಿ ನಿಶ್ಶಬ್ದವಾಗಿರುವ ಸನ್ನಿವೇಶ. ಉನ್ಮತ್ತನಾಗಿರುವ ವಾಜ ಶ್ರವಸನು ಕೃಷ್ಣಾಜಿನದ ಚೀಲವೊಂದನ್ನು ತಲೆಯಮೇಲೆ ಹೊತ್ತು ಕೊಂಡು ಪ್ರವೇಶಿಸುವನು.)

**ವಾಜಶ್ರವಸ:**—(ತನ್ನ ತಲೆಯ ಮೇಲಿನ ಚೀಲವನ್ನು ಕೈಗಳಿಗೆ ತೆಗೆದು ಕೊಂಡು, ಎರಡು ಅಂಗೈಗಳಿಂದಲೂ ಹಿಡಿದು ದೃಷ್ಟಿಸಿ ನೋಡಿ ವಿಕಟವಾದ ಭೀಕರ ಸ್ವರದಲ್ಲಿ ಅಟ್ಟಹಾಸದಿಂದ) ಎಲವೆಲವೋ ಅಸ್ತತೇಜರಾದ ದೇವರುಗಳಿರಾ! ನಿಮ್ಮೆಲ್ಲರನ್ನೂ ಈ ಚೀಲ

ದಲ್ಲಿ ಬಂಧಿಸಿರುವೆನು. ನಿಮ್ಮೆಲ್ಲರನ್ನೂ ಇಂದು ಸಮರಾತ್ರಿಯ ವೇಳೆಗೆ ಬಲಿಕೊಟ್ಟು ಮಾರಣಹೋಮಮಾಡಿ ಜಗತ್ತೇ ನಿರ್ದೈವವಾಯಿತೆಂದು ಹಿಗ್ಗುವೆನು. ನಾನು ಯಾರನ್ನು ಬೇಡಿದರೂ, ಯಾರಿಗೆ ಮೊರೆಯಿಟ್ಟರೂ ನೀವೊಬ್ಬರೂ ನನ್ನ ನಚಿಕೇತನನ್ನು —(ಗದ್ಗದ ಧ್ವನಿಯಿಂದ) ಉಳಿಸಲಿಲ್ಲ. (ಬಿರುಗಣ್ಣಿನ ಶೂನ್ಯದೃಷ್ಟಿಯಿಂದ ನೋಡುತ್ತಿದ್ದು ರೋಷದಿಂದ) ನಿಮ್ಮೆಲ್ಲರನ್ನೂ ಪುಡಿಮಾಡಿ ಧೂಳೆಬ್ಬಿಸುವೆನು. ರಣಬಲಿ. ಇಂದ್ರ, ವರುಣ, ಅಗ್ನಿ, ಮರುತ್ತು, ರುದ್ರ, ಸವಿತೃ, ಎಲ್ಲರನ್ನೂ ಈ ಚೀಲದಲ್ಲಿ ಬಂಧಿಸಿರುವೆನು. ನಿಮ್ಮೆಲ್ಲರ ಮಾರಣಹೋಮದ ಹಬ್ಬವಾದ ಮೇಲೆ ಭೂಲೋಕವು ಸುರಕ್ಷಿತ. ನನ್ನ ಪ್ರಿಯಪುತ್ರ ನಚಿಕೇತನು ಯಮಧರ್ಮರಾಜನ ಅತಿಥಿ. ಯಮನು ಭಕ್ತರಿಗೆ ಹಿರಣ್ಯಗರ್ಭನನ್ನು ತೋರಿಸುವವನು. ಅಮೋಘ ಕರ್ತವ್ಯವನ್ನು ನೆರವೇರಿಸುವ ಧರ್ಮರಾಜನಾದ ದಿವ್ಯಮೂರ್ತಿ. ಯಮನೂ ಉಳಿದಿರಲಿ, ನಾನು ಪಾಪಿ, ಪಾಪಿ. (ವಿಕಟವಾಗಿ ಗಹಗಹಿಸಿ ನಕ್ಕು) ನಚಿಕೇತನು ನನಗಿಂತ ಪಾಪಿ. ನನ್ನ ದೇಹದಲ್ಲಿ ತುಂಬಿದ್ದ ಪಾಪವೆಲ್ಲವನ್ನೂ ಭೇದಿಸಿಕೊಂಡು ಬರುವಷ್ಟು ಬಲಶಾಲಿಯಾದವನು ನನಗಿಂತ ಹೆಚ್ಚಿನ ಪಾಪಮೂರ್ತಿಯಲ್ಲವೆ? ಅಬ್ಬ! ನನ್ನ ಪಾಪವೆಲ್ಲ ರೂಪವನ್ನು ಧರಿಸಿ ಸ್ತ್ರೀಯಾಗಿ ಬಂದರೊ! (ಅಸಹ್ಯವೇಷದಿಂದ ಕೂಡಿ ಗಾಳಿಯು ಹರಿಯುಂತಿರುವ ಅವಗುಂಠನದಿಂದ ಮುಖವನ್ನೂ ದೇಹವನ್ನೂ ಆಚ್ಛಾದಿಸಿಕೊಂಡಿರುವ ಸ್ತ್ರೀವ್ಯಕ್ತಿಯೊಂದು ಬಂದು ನಿಲ್ಲುವುದು) ದಸ್ಯುಕುಲದ ಘೋರ ರೂಪಿಣಿಯು ನೀನಾರೆ? (ಆಲಿಸಿ ಕೇಳಿ) ಏನು, ಏನು, ಸ್ತ್ರೀರೂಪವನ್ನು ಧರಿಸುವ ನನ್ನ ಪಾಪರಾಶಿಯೆ? ಪರಲೋಕದಲ್ಲಿ ನನಗಾಗಿ ಕಾದಿರುವೆಯಾ? ವಿಶ್ವಜಿದ್ಯಜ್ಞಮಾಡಿದ ನನ್ನನ್ನು ಎದುರುಗೊಳ್ಳಬೇಕಾದವರು ಅಪ್ಸರೆಯರು. ನೀನಲ್ಲ. ನಡೆ ತೊಲಗು. ಹೋಗುವುದಿಲ್ಲವೆ?

ಅಬ್ಬ! ಏನೆಂದೆ? ಆಶೆಯಿಂದ ಕೂಡಿ ನಾನು ಪಾಪಮಾಡಿದೆನೆಂದು ಅವಹೇಳನಮಾಡಿದೆಯಾ? ಇಂದ್ರನಿಗೆ ಆಶೆಯಿಲ್ಲವೋ? ಹಾಗಾದರೆ ಅವನ ಸುವರ್ಣ ರಥವನ್ನು ನನಗೆ ಕಳುಹಿಸಲಿ! ವರುಣನಿಗೆ ಆಶೆಯಿಲ್ಲವೋ? ನಾಗಪಾಶವೇ ಮುಂತಾದ ಅವನ ಆಯುಧಗಳನ್ನಿಲ್ಲಿಗೆ ಕಳುಹಿಸಲಿ! ಅವನ ತಲೆಯಮೇಲಿನ ಆಭೋಗವನ್ನು ನನಗೆ ಕೊಡಲಿ! ಸವಿತೃವಿಗೆ ಆಶೆಯಿಲ್ಲವೋ? (ನಗುತ್ತ) ಅಯ್ಯೋ, ಅಯ್ಯೋ, ಸವಿತೃವು ಬಹಳ ದುರಾಶೆಯುಳ್ಳವನು. (ಗಾಂಭೀರ್ಯದಿಂದ) ಹೇಗೆನ್ನುವಿಯಾ? ಕೇಳು, ಅಜ್ಞಳೇ, ಕೇಳು. ಸವಿತೃವು ಸುವರ್ಣ ಹಸ್ತ. ಅವನು ದೇಹಕ್ಕೇ ಚಿನ್ನದ ಕಣ್ಣುಗಳನ್ನೂ, ಚಿನ್ನದ ಹಸ್ತವನ್ನೂ, ಕೀಲಿಸಿ ಕೊಂಡಿದ್ದಾನೆ. ಅವನ ನಾಲಿಗೆಯೂ ಚಿನ್ನದ್ದು. ಅಬ್ಬ! ಮಾತುಮಾತಿಗೂ ಸುವರ್ಣ ಜಿಹ್ವಾ ಪ್ರದರ್ಶನ. ಇವರೆಲ್ಲರಿಗೂ ದುರಾಸೆ. ಇವರೆಲ್ಲರೂ ಈ ಚೀಲದಲ್ಲಿ ಬಂಧಿತರಾಗಿದ್ದಾರೆ. ಕೇಳು, ಕೇಳು. ಬಲಿಷ್ಠರಾದ ನಿರ್ದಯರ ದುರಾಶೆಯೂ ಭೂಷಣಪ್ರಾಯವಾಗಬೇಕೋ? ಅದೇ ದುರಾಶೆಯು ದುರ್ಬಲನಿಗಿದ್ದರೆ ಅವನು ನಾರಕಿಯಾಗಬೇಕೋ? ಪ್ರಭುತ್ವಾಕಾಂಕ್ಷೆಯಿಂದ, ಐಶ್ವರ್ಯಲೋಭದಿಂದ, ಇಂದ್ರನು ತನ್ನ ಮಾತೆಯಾದ ಪೃಥ್ವೀದೇವಿಯನ್ನೂ, ತನ್ನ ತಂದೆಯಾದ ದ್ಯಾರ್ದೇವನನ್ನೂ ಮೂಲೆಗೊತ್ತಿ ತನ್ನ ಪ್ರಭಾವವನ್ನು ಮೆರೆಯಿಸುತ್ತಿದ್ದಾನೆ. ಪ್ರತಿಯೊಂದು ಯಜ್ಞದಲ್ಲಿಯೂ ಅವನಿಗೆ ಹವಿರ್ಭಾಗ. ಅವನಿಗೆ ಪೂಜ್ಯತೆ. (ಅಂತರ್ವೇದನೆಯ ತಾರಸ್ವರದಿಂದ) ಎಲ್ಲಿದೆ, ನ್ಯಾಯವೆಲ್ಲಿದೆ, ಧರ್ಮವೆಲ್ಲಿದೆ, ಎಲ್ಲಿದೆ ನಿಖಿಲ ವಿಶ್ವದಲ್ಲಿ ಸಮದರ್ಶಿತ್ವ? ಮೋಸ. ಮೋಸ. ಬಲಿಷ್ಠರ ಪ್ರಾಭವ; ದುರ್ಬಲರ ಪ್ರಾಣಸಂಕಟ, ಇವೆರಡೇ ಶಾಶ್ವತ. ನೀಚಳೆ! ನಡೆ. ಅವರೆಲ್ಲರಿಗೂ ಇಲ್ಲದ ಪಾಪಸ್ಪರ್ಶವು ನನಗೊಬ್ಬನಿಗೇಕೆ? ನೀನು ನಡೆ. ಓಹೋ! ದೇವಿ

ಯವರು ಹೋಗುವುದಿಲ್ಲವೋ? ನಿಮ್ಮಲ್ಲಿ ಸಾಮರ್ಥ್ಯವಿದ್ದರೆ ದೇವಿಯವರು ಇವರನ್ನು ಹಿಂಸಿಸಬೇಕು. ಇವರಿಗೆ ಶಿಕ್ಷೆಯಾದ ಮೇಲೆ ನನಗೆ ಶಿಕ್ಷೆ. ತೆಗೆದುಕೋ ಈ ಚೀಲವನ್ನು....(ಭಾವ ಚಕಿತನಾಗಿ ಕಂಪಿಸಿ) ಬೇಡ, ಬೇಡ. ಇವರನ್ನು ಮುಟ್ಟಿದರೆ ನಿನಗೂ ಪುತ್ರಶೋಕವು ಬಂದೀತು! ನೀನು ನಡೆ. ಪಾಪ, ಪಾಪ, ಕುರೂಪಿಯೆಂದು ವ್ಯಸನವೆ? ನಚಿಕೇತನು ಬಂದು ತನ್ನ ಪುಣ್ಯಪ್ರಭಾವದಿಂದ ನಿನ್ನನ್ನು ಸ್ಫುರದ್ರೂಪಿಯನ್ನಾಗಿ ಪರಿಣಾಮಗೊಳಿಸುವನು. (ವ್ಯಕ್ತಿಯು ಹೊರಟು ಹೋಗುವುದು) ನಚಿಕೇತ, (ರೋದಿಸುತ್ತ) ನಚಿಕೇತ, ನಚಿಕೇತ, ನಿನ್ನ ಹೆಸರನ್ನುಚ್ಚರಿಸಿದ ಮಾತ್ರವೇ ಪಾಪ ವನಿತೆಯೂ ದೂರ ಸರಿದಳು! ಎಂತಹ ಪುಣ್ಯಶ್ಲೋಕನೋ ನೀನು! ನೀನು ಸಜೀವನಾಗಿರುವಾಗಲೇ ನಿನ್ನನ್ನು ಯಮನಿಗೊಪ್ಪಿಸಿದ ನಿನ್ನ ತಂದೆ ವಾಜಶ್ರವಸನೆಂತಹ ಪಾಪಿಷ್ಠ....(ರೋಷದಿಂದ) ಆ ವಾಜಶ್ರವಸನು ನನ್ನ ಕೈಗೆ ಸಿಕ್ಕಲಿ! ಆ ವಾಜಶ್ರವಸನನ್ನು ದಿಗ್ಬಲಿ ಹೊಡೆಯುತ್ತೇನೆ. ಆದರೆ ಅವನು ಸಿಕ್ಕಬೇಕಲ್ಲ! (ಅಂತರಿಕ್ಷದ ಕಡೆಗೆ ನೋಡುತ್ತ ನಿಲ್ಲುವನು.)

**ನಂದಿನೀದೇವಿ:**—(ಸುಕನ್ಯೆಯೊಡನೆ ಪ್ರವೇಶಿಸಿ) ಇದೋ! ಇಲ್ಲಿ ನಿಂತಿದ್ದಾರೆ.

**ಸುಕನ್ಯೆ:**—(ತಂದೆಯಬಳಿಗೆ ಹೋಗಿ) ಬಹಳವಾಗಿ ಹುಡುಕಿದೆವು.

**ವಾಜಶ್ರವಸ:**-ಹುಡುಕಿದಿರಾ? ಸಿಕ್ಕಿದನೋ, ಆ ಪಾಪಿ ವಾಜಶ್ರವಸ? ನಾನು ಅವನನ್ನು ಬಲಿಕೊಡುತ್ತೇನೆ. ಬರಲಿ.

**ಸುಕನ್ಯೆ:**—ತಂದೆಯೆ, ನಾನು, ನಾನು, ಸುಕನ್ಯೆ.

**ವಾಜಶ್ರವಸ:**—ಸುಕನ್ಯೆ, ಸುಕನ್ಯೆ........ಕೇಳಿದ ಹೆಸರು........ (ಆಲೋಚಿಸಿ) ಯಾರು ಸುಕನ್ಯೆ?........ನಿಜ, ನಿಜ. ಅದೊಂದು

ದಂತದಬೊಂಬೆ. ಅಲ್ಲ, ಅಲ್ಲ. ಶುದ್ಧ ಗೌರವರ್ಣದ ಸುರಸುಂದರಿ. ಹೇಳಿದ್ದ, ಹೇಳಿದ್ದ, ನಚಿಕೇತ. ಸುಕನ್ಯೆ ನೂರು ನಚಿಕೇತರಿಗೆ ಸಮವೆಂತ. (ಸುಕನ್ಯೆಯನ್ನೆತ್ತಿಕೊಂಡು, ಪ್ರೀತಿಯಿಂದ ತನ್ನ ಹೃದಯಕ್ಕೆ ಅಪ್ಪಿಕೊಂಡು) ನೂರುನಚಿಕೇತರ ಆಲಿಂಗನ. (ನಂದಿನೀ ದೇವಿಯು ನೀರವವಾಗಿ ರೋದಿಸುತ್ತ ಅವನ ಸಮೀಪಕ್ಕೆ ಬಂದು ನಿಂತುದನ್ನು ಕಂಡು ಅವಳನ್ನು ದೃಷ್ಟಿಸಿ ನೋಡಿ) ನೀನಾರು? ನಂದಿನಿಯೆ? ಅದೇ ಮುಖ. ನಿನ್ನನ್ನೂ ಎಲ್ಲಿಯೋ ನೋಡಿದಂತಿದೆ. ನಂದಿನಿಯೆ?

**ನಂದಿನೀದೇವಿ:**—(ನಿಟ್ಟುಸಿರುಬಿಟ್ಟು) ಅಹುದು, ಪ್ರಿಯನೆ.

**ವಾಜಶ್ರವಸ:**—ನಂದಿನಿ, ನಂದಿನಿ, ಏನು ಮುದ್ದುಹೆಸರು! ನಂದಿನಿ, ನಿನ್ನ ಹೆಸರಿನಲ್ಲಿ ಸುಧಾರಸವೇ ತುಂಬಿದೆ. ನಿನ್ನಲ್ಲಿ ನನಗೆ ಪ್ರೀತಿ. ನಿನ್ನ ಹೆಸರೇಕೆ ಇಷ್ಟುಮುದ್ದಾಗಿದೆ? (ಮೃದುವಾಗಿ ನಕ್ಕು) ತಿಳಿಯಿತು. ಪ್ರೇಮಮಯನಾದ ನಚಿಕೇತನು ನಿನ್ನ ಗರ್ಭಸುಧಾಂಬುಧಿಯಲ್ಲಿ ಜನಿಸಿದುದರಿಂದ........ನಚಿಕೇತನಾರು?

**ನಂದಿನೀದೇವಿ:**—ದೇವ! ಸವಿತೃವರೇಣ್ಯ! ನನಗೆ ಎಂತಹ ದುಃಖವನ್ನು ತಂದೆ! ದ್ಯಾರ್ದೇವ, ಪೃಥ್ವೀಮಾತೆ! ನನ್ನ ಪುತ್ರನನ್ನು ಕಾಪಾಡಿ! ನನ್ನ ಪತಿಯನ್ನುದ್ಧರಿಸಿ!

**ಸುಕನ್ಯೆ:**—ತಂದೆಯೆ! ನಚಿಕೇತನು ಯಾರೆನ್ನುತ್ತಿರುವೆ. ಅವನು ನಿನ್ನ ಮಗನಲ್ಲವೆ? ನಮ್ಮಣ್ಣ ನಚಿಕೇತ.

**ವಾಜಶ್ರವಸ:**—ನಿಜ. ನಂದಿನಿಯ ಪುಣ್ಯದಿಂದ ಅವನು ಹುಟ್ಟಿದ. ನನ್ನ ಪಾಪದಿಂದ ಅವನು ಮಾಯವಾದ. ನಂದಿನಿ! ವಾಜಶ್ರವಸನ ಎದೆಯನ್ನು ಸೀಳಿ ನೋಡುತ್ತೇನೆ. ವರುಣನ ಖಡ್ಗವನ್ನು ಬೇಡಿ ವಾಜಶ್ರವಸನ ಎದೆಯನ್ನೇ ತೋಡುತ್ತೇನೆ. ಆವನ ಪುತ್ರಶೋಕಕ್ಕೆ ಕಾರಣವಾದ ಕೋಪವೆಂಬ ಆ ಪಶುವು

ಯಾವಮೂಲೆ ಮೇದಸ್ಸುಗಳಲ್ಲೇ ಅಡಗಿದ್ದರೂ ಖಡ್ಗಹಸ್ತನಾಗಿ ಅದನ್ನು ಸೆಳೆದುತಂದು ಅದರಮೇಲೆ ನನ್ನ ಸೇಡನ್ನು ತೀರಿಸುತ್ತೇನೆ. ರೋಷಪಶುವನ್ನು ಛಿದ್ರ ಛಿದ್ರವಾಗಿ ಕತ್ತರಿಸುತ್ತೇನೆ. ನಚಿಕೇತನು ನನ್ನ ಗುರು. ಶಿಲಾಖಂಡಗಳು ನನ್ನ ಗುರು. ತರುಗುಲ್ಮಗಳು ನನ್ನ ಗುರು. ಜಗತ್ತೇ ನನ್ನ ಗುರು. ನಚಿಕೇತನನ್ನು ಹೆತ್ತ ನಂದಿನಿಯೇ ನನ್ನ ಪರಮಗುರುವಾದ ಪೂಜ್ಯವಸ್ತು. ವಾಮದೇವನು ನನ್ನ ನಿತ್ಯಗುರು. ವಾಮದೇವಾ, ವಾಮದೇವಾ, ಬಂದೆ ಬಂದೆ! (**ಹೋಗುವನು. ನಂದಿನೀದೇವಿಯು ಆಕಾಶದಕಡೆಗೆ ಕೈಮುಗಿದು ರೋದಿಸುತ್ತಾ ಹೋಗುವಳು. ಸುಕನ್ಯೆಯೂ ದುಃಖಪಡುತ್ತ ಹೋಗುವಳು.**)

**ನಚಿಕೇತ:**— (ಗದ್ಗದ ಧ್ವನಿಯ ಉಚ್ಚ ಸ್ವರದಿಂದ) ತಂದೆಯೆ, ತಂದೆಯೆ! (**ಸಮಾಧಾನಮಾಡಿಕೊಂಡು**) ಅಗ್ನಿದೇವ! ಮೋಹದ ಮಾಯಾವರಣವು ನನ್ನ ಮನಸ್ಸನ್ನು ಮುಚ್ಚದಂತೆ ಅನುಗ್ರಹಿಸು. (**ಮೊದಲು ವಿಭಾಗವಾಗಿದ್ದ ತೆರೆಯು ಮತ್ತೆ ಕೂಡಿಕೊಳ್ಳುವುದು.**)

**ಚಿತ್ರಗುಪ್ತ:**—ನಚಿಕೇತ! ಈಗಲಾದರೂ ನನ್ನ ಮಾತನ್ನು ಕೇಳಿ ಉದ್ಧಾರವಾಗು. ಭೂಲೋಕಕ್ಕೆ ಹಿಂದಿರುಗಿ ಅವರ ದುಃಖವನ್ನು ನಿವಾರಣೆಮಾಡಿ ಸುಖದಿಂದಿರು.

**ನಚಿಕೇತ:**—ಪ್ರಿಯ ಬಂಧುವೆ, ನನಗೆ ಉಪಕಾರಮಾಡು. ಧರ್ಮಪ್ರಭುವಿನ ಆಜ್ಞೆಯನ್ನು ನೆರವೇರಿಸು. ನಾನು ಕೊಳಲು. ಯಮಧರ್ಮರಾಜನು ವೇಣುಗಾನಲೋಲ. ಕೊಳಲಿಗೆ ಅಧಿಕಾರವೇನೂ ಉಳಿದಿಲ್ಲ.

**ಚಿತ್ರಗುಪ್ತ:**— ನಿನ್ನ ದೇಹವೇ ದಹಿಸಿಹೋಗುವಂತಹ ಕ್ರೂರ ಶಾಸನಮಾಡಿರುವವನು ಧರ್ಮಪ್ರಭುವೆ? ಅವನ ಆಜ್ಞೆಯು ಅಧರ್ಮವಾದುದಲ್ಲವೆ?

**ನಚಿಕೇತ:**— (ಮೃದುವಾಗಿ ನಕ್ಕು) ಅಯ್ಯೋ! ಧರ್ಮದ ನಿಜ ಸ್ವರೂಪವು ನನ್ನಂತಹ ಅಲ್ಪಮತಿಗಳಿಗೆ ಗೋಚರಿಸುವಷ್ಟು ಸರಳವೆ? ನನ್ನ ಸಂಕುಚಿತ ದೃಷ್ಟಿಯಲ್ಲಿ ಅಧರ್ಮವೆಂದು ತೋರ ಬಹುದಾದುದು ಯಮಧರ್ಮರಾಜನ ವಿಶಾಲ ದೃಷ್ಟಿಯಲ್ಲಿ ಧರ್ಮದ ಸಾರವೇ ಆಗಿರಬಹುದು. (ಮಂದಸ್ಮಿತ ವದನನಾಗಿ ಪ್ರೇಮ ಪರಿಸ್ಪಂದನ ಪರಿಶೋಭಿತವಾದ ಮುಖಮುದ್ರೆಯಿಂದ) ಪ್ರೇಮಚಂದ್ರಿಕೆಯಿಂದ ಒಮ್ಮೆ ಹೃದಯವು ಬೆಳಗಿದರೆ........ ಮನಸ್ಸು ಭಕ್ತಿನಮ್ರವಾಗಿ ಪರಿಶೋಭಿಸಿದರೆ........ಜೀವನವೇ ಕೈವಲ್ಯದ ಸೋಪಾನವಾಗುವುದು. ಪೂಜ್ಯನೆ! ವಧ್ಯಭೂಮಿಗೆ ಹೋಗೋಣ.

**ಚಿತ್ರಗುಪ್ತ:**—ಮಗುವೆ! ಈ ಸರಪಳಿಯಿಂದ ನಿನ್ನನ್ನು ಬಂಧಿಸ ಲಾರೆ. ಇದು ನೋಡುವುದಕ್ಕೇನೋ ಸುವರ್ಣರಚಿತವಾದಂತೆ ಕಾಣುತ್ತಿದೆ. ಇದು ಮೈಗೆ ಸೋಕಿದೊಡನೆಯೇ ದುಸ್ಸಹವಾದ ಯಾತನೆಯಾಗುವುದು. ನರಮಂಡಲವೇ ಜರ್ಝರಿತವಾಗು ವಂತೆ ತೋರುವುದು.

**ನಚಿಕೇತ:**— ದೇಹಾಭಿಮಾನದ ಅಂಧ ತಮಸ್ಸಿಗೆ ಗುರಿಯಾಗಿ, ಅಜ್ಞಾನ ಮಗ್ನತೆಯ ಕಾರಾಗೃಹ ವಾಸದಿಂದ ಪಾರಾಗುವ ಈಗಿನ ಸನ್ನಿವೇಶದಿಂದ ನನಗೆ ಪರಮೋಪಕಾರವಾಗುವುದು. ಪೂಜ್ಯನೆ, ನಡೆ. ಆತ್ಮವಿದ್ಯೆಯ ಅನಂತಧಾಮವು ಬಲಹೀನ ರಿಗೆ ಲಭಿಸತಕ್ಕುದಲ್ಲ.

**ಚಿತ್ರಗುಪ್ತ:**—ಮುಂದೆ ನೀನೇನನ್ನು ಮಾಡುವೆ?

**ನಚಿಕೇತ:**— ಶಿಲಾಸ್ತಂಭಕ್ಕೆ ನನ್ನನ್ನು ಬಂಧಿಸಿದಮೇಲೆ ದೊರೆ ಯುವ ಅಲ್ಪಾವಕಾಶದಲ್ಲಿಯೇ ಅಗ್ನಿಯನ್ನು ಕುರಿತು ಧ್ಯಾನ ಮಾಡುವೆನು. ನನ್ನ ಪರಮ ಗುರುವಾಗಿ, ಲೋಕಪೂಜ್ಯ ನಾಗಿ, ಬ್ರಹ್ಮವಿದ್ಯಾಚಾರ್ಯನೆನಿಸಿರುವ ಯಮಧರ್ಮರಾಜನು

ಉಪದೇಶಿಸಿರುವ ಅಗ್ನಿವಿದ್ಯೆಯ ಅನುಸಂಧಾನದಿಂದ ಸಿದ್ಧಿಯನ್ನು ಪಡೆದು, ಇಲ್ಲಿರುವ ನನ್ನ ದೇಶಬಾಂಧವರ ದುಃಖವನ್ನೂ, ಭೂಲೋಕದಲ್ಲಿರುವ ನನ್ನ ದೇಶಬಾಂಧವರ ದುಃಖವನ್ನೂ ಕೊನೆಗಾಣಿಸಬೇಕೆಂದೂ, ಸಮಸ್ತ ಶಿಕ್ಷೆಗಳನ್ನೂ ನನಗೆ ವಿಧಿಸಿ ನರಕಯಾತನೆಯಿಂದ ಅವರನ್ನು ಬಿಡುಗಡೆ ಮಾಡಬೇಕೆಂದೂ, ಅಗ್ನಿಯನ್ನು ಬೇಡಿಕೊಳ್ಳುವೆನು. ಪೂಜ್ಯನೆ, ಕಾಲಹರಣವು ಬೇಡ. ನಡೆ.

**ಚಿತ್ರಗುಪ್ತ:**—ಇದೊಂದು ಬಯಲು ಭ್ರಾಂತಿ. ಮರುಮರೀಚಿಕೆ.

**ನಚಿಕೇತ:**—ಹಾಗೂ ಆಗಲಿ, ದೇಹಾತೀತವಸ್ತುವೊಂದುಂಟೇ—ಎಂಬ ಪರೀಕ್ಷೆಯಾದರೂ ನಡೆದುಹೋಗಲಿ. ಅದಕ್ಕಾದರೂ ಅನುಕೂಲವಾಗಲಿ. (ಕೈಮುಗಿದು) ಗುರುದೇವ! ಪ್ರಭೋ ಯಮಧರ್ಮರಾಜ! ಆತ್ಮೋದ್ಧಾರಕ್ಕೆ ದಾರಿ ತೋರಿಸಿ ಉಪಕರಿಸು. (**ಸ್ತೋತ್ರಮಾಡುವನು. ಬಳಿಕ ಇಬ್ಬರೂ ಹೋಗುವರು**)

(**ದ್ಯಾರ್ದೇವನು ಪ್ರವೇಶಿಸುವನು. ಧವಳವರ್ಣದ ದೀರ್ಘಶ್ಮಶ್ರುವಿನಿಂದ ಕೂಡಿ, ಬಿಳಿಯ ಧೋತ್ರವನ್ನೂ, ಜರತಾರಿಯಿಂದ ಮಿನುಗುತ್ತಿರುವ ಉತ್ತರೀಯವನ್ನೂ ಧರಿಸಿರುವನು.**)

**ದ್ಯಾರ್ದೇವ:**—(**ನೇಪಥ್ಯದ ಕಡೆಗೆ ನೋಡಿ**) ದೇವಿ! ಪೃಥ್ವೀ! ನೀನು ಸರ್ವಂಸಹೆಯಾಗಿರುವೆ. ಬಾ, ಬಾ. ನನ್ನ ಮನಸ್ಸು ಅನಿರ್ವಚನೀಯವಾದೊಂದು ರೀತಿಯಲ್ಲಿ ಪ್ರಶಾಂತವಾಗಿದೆ. ಅಂತರಾತ್ಮವು ಪ್ರಸನ್ನವಾಗಿದೆ. ಈ ದೃಷ್ಟಿಯಿಂದ ನೋಡಿದರೆ ನಚಿಕೇತನಿಗೆ ಕೇಡಾಗದೆಂದು ತೋರುತ್ತದೆ.

**ಪೃಥ್ವೀದೇವಿ:**—(**ನಂದಿನಿಯ ರೂಪವನ್ನು ಧರಿಸಿ ಪ್ರವೇಶಿಸಿ**) ನಚಿಕೇತನು—ನನ್ನ ಮುದ್ದು ನಚಿಕೇತನು—ವಿಪತ್ತಿನ ಮುಖದಲ್ಲಿದ್ದಾನೆ. ಒಮ್ಮೆ ಮನಶ್ಶಾಂತಿ. ಒಮ್ಮೆ ಕಳವಳ. ಹೀಗಿದೆ ನನ್ನ ಸ್ಥಿತಿ. ವತ್ಸೆ ನಂದಿನೀದೇವಿಯು ಮಗುವಿನ ಯೋಗಕ್ಷೇಮ

ವನ್ನು ದಂಪತಿಗಳಾದ ನಮ್ಮಿಬ್ಬರಿಗೂ ವಹಿಸಿದ್ದಾಳೆ. ನನ್ನ ಮಡಿಲಿಗೊಪ್ಪಿಸಿದ ನನ್ನ ಮುದ್ದು ಮಗುವೇನಾದರೂ......... (ಶೋಕಾವೇಗದಿಂದ) ಅಯ್ಯೋ! ಅಚಿಂತ್ಯವಾದ ದಾರುಣಸ್ಥಿತಿ.

**ದ್ಯಾವ್ರ್ದೇವ:**—ನೀನು ವಿಶ್ವಂಭರೆಯಾದ ದೇವಿಯೆಂಬುದನ್ನೂ ಮರೆತಂತಿದೆ.

**ಪೃಥ್ವೀದೇವಿ:**--ನಾಥ! ಮಾತೃತ್ವದ ಅನುಭವದ ಮುಂದೆ ದೇವತ್ವವು ಕರಗಿಹೋಗುತ್ತದೆ.

**ದ್ಯಾವ್ರ್ದೇವ:**—ಹಿರಣ್ಯಗರ್ಭನೊಬ್ಬನನ್ನುಳಿದು ಮತ್ತಾರುತಾನೆ ಮಾಯೆಯ ಹಿಡಿತದಿಂದ ತಪ್ಪಿಸಿಕೊಳ್ಳಬಲ್ಲರು? ಇದೇನು, ಈಗ ನೀನು ನಂದಿನಿಯ ರೂಪವನ್ನು ಧರಿಸಿರುವೆ?

**ಪೃಥ್ವೀದೇವಿ:**—ಹಿಂಸೆಯನ್ನನುಭವಿಸುತ್ತಿರುವ ನಚಿಕೇತನ ಬಳಿಗೆ ಅವನ ತಾಯಿಯ ರೂಪದಲ್ಲಿ ಹೋಗಬೇಕೆಂದು....ನಚಿಕೇತನು ಅನುಭವಿಸುತ್ತಿರುವ ಹಿಂಸೆಯನ್ನು ಸ್ಮರಿಸಿದರೆ, ನನ್ನ ಹೃದಯವೇ ಕಿತ್ತುಬರುತ್ತಿದೆ. ಆದರೂ ದುಃಖ ಮಧ್ಯದಲ್ಲಿ ಏನೋ ಒಂದು ಶಾಂತಿಪ್ರಭೆ. ವತ್ಸನು ನನ್ನ ಜೀವದ ಜೀವವೆಂಬ ಭಾವನೆಯು ರೂಢಮೂಲವಾಗಿದೆ. ಪಾಪ!....ಸುಕುಮಾರನಾದ ಬಾಲಕನು ಎಷ್ಟು ಹಿಂಸೆಯನ್ನು ತಾಳಬೇಕಾಗಿದೆ!

**ದ್ಯಾವ್ರ್ದೇವ:**—ಮಹಾನುಭಾವನಲ್ಲವೇ ಆ ವೀರಬಾಲಕನು! ಇಂತಹ ತೇಜಸ್ವಿಗಳು ನಿನ್ನ ಸಂತತಿ ಪರಂಪರೆಯಲ್ಲಿ ಎಷ್ಟು ಮಂದಿಗಳಿದ್ದಾರೆ ನೋಡು! ಮುಂದೆ ಎಷ್ಟು ಮಂದಿ ಜನಿಸುವವರಾಗಿದ್ದಾರೆ, ನೋಡು. ವಸುಂಧರೆಯೆಂಬ ನಾಮಧೇಯವು ಅನ್ವರ್ಥವಾಯಿತಲ್ಲವೆ? ನೀನು ಭಾಗ್ಯವತಿ; ಧನ್ಯಾತ್ಮಳು.

**ಪೃಥ್ವೀದೇವಿ:**--ನಂದಿನೀದೇವಿಯು ಮಗುವಿನ ಯೋಗಕ್ಷೇಮವನ್ನು ನಮಗೊಪ್ಪಿಸಿದುದೆಲ್ಲಿ ನಿರರ್ಥಕವಾದೀತೋ—ಎಂದು ನನಗೆ ಕಳವಳ.

**ದ್ಯಾದೇವ:**—ದೇವಿ! ನೀನು ಹೀಗೆ ತಾಳ್ಮೆಗೆಡಬಾರದು. ನಮಗೂ ಈ ಮೋಹದ ತೆರೆಯೆ! ಯೋಚಿಸಿ ನೋಡು! ಅಷ್ಟು ಹಿಂಸೆಯನ್ನೂ ಸಹಿಸುತ್ತ, ಯಮಧರ್ಮರಾಜನನ್ನು ಗುರುವೆಂದು ಭಾವಿಸಿ, ಹಿರಣ್ಯಗರ್ಭನಲ್ಲಿ ಅಚಲ ಭಕ್ತಿಯನ್ನಿಟ್ಟುಕೊಂಡಿರುವ ವತ್ಸನು ಎಂತಹ ಪುಣ್ಯಶಾಲಿಯೆಂಬುದನ್ನು ಯೋಚಿಸಿ ನೋಡು.

**ಪೃಥ್ವೀದೇವಿ:**—ಆ ತೇಜೋಭಾಸ್ಕರನೆಲ್ಲಿ ಅಸ್ತವಾಗುವನೋ—ಎಂದು ನನ್ನ ಮನಸ್ಸಿಗೆ ತವಕ. ನನ್ನ ಕಳವಳವು ಅಪರಿಮಿತವಾಗಿದೆ. ಆದರೂ ಅನಿರ್ವಚನೀಯವಾದೊಂದು ಶಾಂತಿಯಿದೆ.

**ದ್ಯಾದೇವ:**—ನನ್ನ ಮನಸ್ಸು ಪ್ರಸನ್ನವಾಗಿದ್ದರೂ ನನ್ನ ಆತಂಕವೇನೂ ಕಡಮೆಯಾದುದಲ್ಲ.

**ಪೃಥ್ವೀದೇವಿ:**—ಮಗುವನ್ನು ಎಷ್ಟು ಹೊತ್ತಿಗೆ ನೋಡುವೆನೋ ಎನ್ನಿಸಿದೆ. ಹೋಗೋಣ.

(ಈರ್ವರೂ ಹೋಗುವರು)

---

## ದೃಶ್ಯ ೬

[ವಧ್ಯಸ್ಥಾನದಂತೆ ತೋರುತ್ತ ಭೀಕರವೆನ್ನಿಸುವ ಮಟ್ಟಿಗೆ ನಿಶ್ಶಬ್ದವಾದ ಅರಣ್ಯ ಪ್ರದೇಶ. ಅಲ್ಲೊಂದು ದೊಡ್ಡ ಶಿಲಾಸ್ತಂಭಕ್ಕೆ ನಚಿಕೇತನನ್ನು ಬಿಗಿದಿರುವರು. ಅವನ ಕಾಲುಗಳು ಚಿಕ್ಕದೊಂದು ಬಂಡೆಯಮೇಲಿರುವುವು. ಚಿತ್ರಗುಪ್ತನ ಕೈಯ್ಯಲ್ಲಿದ್ದ ಸರಪಳಿಯಿಂದ ಅವನ ದೇಹವನ್ನು ಶಿಲಾಸ್ತಂಭಕ್ಕೆ ಬಂಧಿಸಿರುವರು.]

**ನಚಿಕೇತ:**—ಅಯ್ಯೋ! ಇನ್ನೂ ಹಾಳು ದೇಹಾಭಿಮಾನವು ನಶಿಸಿಹೋಗಲಿಲ್ಲವೆ? ಕಣ್ಣು ಮುಚ್ಚಿದರೆ ಈ ಪ್ರಪಂಚವೇ ಶೂನ್ಯ. ಆಗಿನ ಅಂಧಕಾರದಲ್ಲಿ, ಕಣ್ಣಿಲ್ಲದ ಕುರುಡು ಹಕ್ಕಿಯ ರಕ್ಕೆಗಳನ್ನು ಬಡಿದಂತೆ, 'ನಾನು, ನಾನು' ಎಂದು ಜೀವಪಕ್ಷಿಯು ಚೀರಿಡುವ ಧ್ವನಿಯೊಂದೇ ಕೇಳಿಬರುವುದು. ಆ ಧ್ವನಿಯನ್ನು ಲಾಲಿಸಿ ಜೀವನ ಸಮಸ್ಯೆಯನ್ನು ಭೇದಿಸಬೇಕಲ್ಲವೆ? ಅಗ್ನಿದೇವ! ನೀನು ದೇವತೆಗಳಿಗೂ ಮನುಷ್ಯರಿಗೂ ಪ್ರಿಯನು. ವಾಸನಾತ್ರಯಗಳನ್ನೂ ನಾಶಗೊಳಿಸಿ ಮೋಕ್ಷಸಾಧಕವಾದ ರಾಜ ಮಾರ್ಗವನ್ನು ತೋರಿಸು. ದೇವ! ಈ ಹಿಂಸೆಯನ್ನು ತಾಳಲಾರೆ. (ಕಣ್ಣುಗಳನ್ನು ಮುಚ್ಚಿಕೊಳ್ಳುವನು.)

**ಪೃಥ್ವೀದೇವಿ:**—(ಪ್ರವೇಶಿಸಿ) ವತ್ಸ, ವತ್ಸ, ಹೇಗಿರುವೆ? (ನಚಿಕೇತನ ಬಳಿಗೆ ಬಂದು ಪ್ರೀತ್ಯಾದರಗಳಿಂದ ಅವನ ಹಣೆಯನ್ನು ಸವರಿ) ಕಣ್ದೆರೆದು ನೋಡು ಕಂದ. (ಕಂಬನಿದುಂಬಿ) ಮಗು, ನಚಿಕೇತ!

**ನಚಿಕೇತ:**—(ಕಣ್ದೆರೆದು, ಬಳಲಿಕೆಯ ಜೊತೆಗೆ ಆಶ್ಚರ್ಯ ಸಂತೋಷಗಳು ವ್ಯಕ್ತವಾಗುವ ಮುಖಭಾವದೊಡನೆ) ನನ್ನ ಪೂಜ್ಯಮಾತೆ!

ನಾನು ನಮಸ್ಕಾರಮಾಡುವ ಭಾಗ್ಯಕ್ಕೆ ದೂರನು. ಮನಸಾ ವಂದಿಸುತ್ತೇನೆ. ಮಾತೇ! ಮನ್ನಿಸು.

**ಪೃಥ್ವೀದೇವಿ:**—ನಾನು ನಿನ್ನ ಮಾತೆಯಲ್ಲ, ಮಗು.

**ನಚಿಕೇತ:**—(ದೈನ್ಯದ ಆಕ್ರಂದನ ಸ್ವರದಿಂದ) ನೀನು ನನ್ನನ್ನು ಪುತ್ರನೆಂದೂ ಒಪ್ಪಲಾರದಷ್ಟು ಪಾಪಿಯೇ ನಾನು! ಈ ನಚಿಕೇತನು ನಿಜವಾಗಿಯೂ ಹತಭಾಗ್ಯನೆಂದು ಈಗ ತಿಳಿಯಿತು. ಆಯ್ಯೋ, ತಾಯಿಯೂ ನನ್ನನ್ನು ಮಗನೆಂದು ಘೋಷಿಸಲಾರದ ಪರಿಸ್ಥಿತಿ. ಯಮಧರ್ಮರಾಜನು ಮಾನವರಿಗೆ ಶಿಕ್ಷೆವಿಧಿಸಿ ಹಿಂಸಿಸುತ್ತಿರುವುದನ್ನು ನೋಡಿ ಆತನಲ್ಲಿ ಬಿರುನುಡಿಗಳನ್ನಾಡಿದ ಗುರುದ್ರೋಹಪಾತಕದಿಂದಲೇ ಹೀಗಾಗಿರಬೇಕು. ಆದರೆ.... ಆದರೆ....ಭಕ್ತಿಯಿಂದಲೇ ಕೂಡಿ ನಿಜವನ್ನೇ ನುಡಿದೆನಲ್ಲಾ! ಶೋಕಾವೇಗವನ್ನು ಸಹಿಸಬೇಕಾಗಿದ್ದಿತೋ ಏನೋ! ಯಮಧರ್ಮರಾಜ! ಕ್ಷಮಿಸು. ನೀನೆನ್ನ ಭಾಗ್ಯದೇವತೆ! ನೀನೆನಗೆ ದೈವಸ್ವರೂಪ.

**ಪೃಥ್ವೀದೇವಿ:**—ಕಂದ! ನಿನಗೆ ಈ ಮನೋಧರ್ಮವೇ ಶಾಶ್ವತವಾಗಿರಲಿ.

**ನಚಿಕೇತ:**—(ಸಂತೋಷದಿಂದ) ನನ್ನನ್ನು ಮಗನೆನ್ನಲು ಇನ್ನು ನಿನ್ನ ಮನಸ್ಸು ಒಪ್ಪುವುದೆ? ನನಗಾಗಿ ಎಷ್ಟುದೂರ ಬಳಲಿ ಬಂದೆಯಮ್ಮ!

**ಪೃಥ್ವೀದೇವಿ:**-(ಕಂಬನಿ ಸುರಿಸುತ್ತ ನಚಿಕೇತನನ್ನು ಮೈದಡವಿ) ಕಂದ! ನಾನು ನಿನ್ನ ಮಾತೆಯಲ್ಲಪ್ಪ.

**ನಚಿಕೇತ:**—ನನ್ನ ತಾಯಿಯ ರೂಪ. ಅದೇ ಕಂಠಧ್ವನಿ. ಅದೇ ಪ್ರೀತಿ ಮಮತೆಗಳು! ಕಣ್ಣುಗಳಲ್ಲಿ ಅದೇ ಕರುಣಾರಸ ಪ್ರವಾಹ....(ಯೋಚಿಸಿ) ನೀನಾರು?

**ಪೃಥ್ವೀದೇವಿ:**—ಕಂದ! ನಾನು ಪೃಥ್ವೀ. ನೀನೂ ನನ್ನ ಸಂತಾನ ಪರಂಪರೆಗೆ ಸೇರಿದವನು. ನವಸೌರಭ ಯುಕ್ತವಾದ ದಿವ್ಯ ಕುಸುಮ.

**ನಚಿಕೇತ:**—ದೇವಮಾತೆಯಾದ ಪೃಥ್ವೀದೇವಿ! ನನ್ನ ವಂದನೆಗಳನ್ನು ಸ್ವೀಕರಿಸು. ನೀನು ಮೈದಡವಿದುದರಿಂದ ನನ್ನ ಬಾಧೆಗಳೆಲ್ಲವೂ ಪರಿಹಾರವಾಯಿತು. ನಿನ್ನ ಅಮೃತಹಸ್ತ ಸ್ಪರ್ಶದಿಂದ, ನನ್ನ ಪೂಜ್ಯಗುರುವಾದ ಯಮಧರ್ಮರಾಜನುಪದೇಶಿಸಿರುವ ಅಗ್ನಿವಿದ್ಯೆಯ ಅನುಸಂಧಾನಕ್ಕೆ ತ್ರಾಣವುಂಟಾಯಿತು. ತಾಯೆ! ನೀನು ನನ್ನ ಮಾತೆಯಂತೆಯೇ ರೂಪವನ್ನು ತಳೆದಿರುವುದೇಕೆ? ನಾನು ತಿಳಿಯಬಹುದೆ?

**ಪೃಥ್ವೀದೇವಿ:**—(ಕಂಬನಿದುಂಬಿ) ದುಸ್ಸಹವಾದ ಯಾತನೆಯೊದಗಿರುವಾಗ ಸ್ತ್ರೀಪುರುಷರಿಗೆ "ಅಮ್ಮಾ" ಎಂಬೆರಡು ಅಮೃತಾಕ್ಷರಗಳೇ ಚೈತನ್ಯಧಾರೆಯನ್ನೆರೆಯುತ್ತವೆ. ಆಗಿನ ಸ್ಥಿತಿಯಲ್ಲಿ ಮಾತೃಸಾನ್ನಿಧ್ಯಕ್ಕೆ ಮಿಗಿಲಾದುದು ಮತ್ತಾವುದೂ ಇಲ್ಲ. ಕಂದ! ಅದಕ್ಕಾಗಿ ನಾನು ನಿನ್ನ ಮಾತೆಯಂತೆ ರೂಪವನ್ನು ಧರಿಸಿರುವೆನು.

**ನಚಿಕೇತ:**—ಮಾತೃರೂಪ........ದೇವತ್ವದ ಉಚ್ಚಶಿಖರದಲ್ಲಿದ್ದೂ ಮಾತೃತ್ವದ ಪುರುಕ. ದ್ವಂದಾತೀತೆಯಾಗಿದ್ದೂ ಈ ನಚಿಕೇತ ಹತಕನಿಗಾಗಿ ಕಂಬನಿಯ ಅಮೃತವರ್ಷ. ದೇವಮಾತೆಯಾಗಿದ್ದೂ, ನನ್ನ ಮಾತೆಯರೂಪದಿಂದ ಹುಲುಮನುಜನಾದ ನನಗೆ ಸಂದರ್ಶನ. ದೇವತ್ವ ಶೃಂಖಲೆಯನ್ನೂ ಭೇದಿಸಿ ಬಂದು ಭೂಮ್ಯಂತರಿಕ್ಷಗಳನ್ನು ಆವರಿಸಿ ನಿಂತಿರುವ ಓ ಮಾತೃತ್ವವೆ! ನಿನಗೆ ನಮೋನಮೋ! ಭೂಲೋಕದ ಅಮೃತತ್ವವಾದ ಓ ಮಾತೃತ್ವವೆ! ನಿನಗೆ ನಮೋನಮೋ. ಬ್ರಹ್ಮಾಂಡ

ವನ್ನೂ ಬೆಳಗಿಸುತ್ತ ನಿಂತಿರುವ ಪ್ರೇಮ ಸುಧಾಕಿರಣ ನಿವಹ ವಾಗಿರುವ ಓ ಮಾತೃತ್ವವೇ! ನಿನಗೆ ನಮೋನಮೋ!

**ಪೃಥ್ವೀದೇವಿ:**—ಕಂದ, ನಿನ್ನ ಹೃದಯವೆಷ್ಟು ಕೋಮಲ! (ಪ್ರವೇಶಿಸಿ ಸಮೀಪಕ್ಕೆ ಬಂದ ದ್ಯಾರ್ದೇವನನ್ನು ತೋರಿಸಿ) ನಿನ್ನನ್ನು ಸಂತೈಸಲು ದಂಪತಿಗಳಿಬ್ಬರೂ ಬಂದಿದ್ದೇವೆ. ಪ್ರಾಣಿಮಾತ್ರದ ಸುಖಸಂತೋಷಗಳೇ ನಮ್ಮಿರ್ವರ ಸ್ನಾಯು ಬಲ ಪ್ರಾಣಿಮಾತ್ರದ ಶೋಕ ಸಂತಾಪಗಳೇ ನಮ್ಮ ಹೃದಯ ವನ್ನು ದಹಿಸುವ ದಾವಾಲನಜ್ವಾಲೆ. ಪ್ರಸನ್ನವಾಗಿ ನಿಂತಿರುವ ದ್ಯಾರ್ದೇವನನ್ನು ನೋಡು, ಕಂದ.

**ನಚಿಕೇತ:**—ದೇವ ಮಾತಾಪಿತೃಗಳಾಗಿ ಭಾಗ್ಯದೇವತೆಗಳಂತೆ ಈ ದೀನನ ಬಳಿಗೆ ಬಂದಿರುವ ನಿಮ್ಮಿರ್ವರಿಗೂ ನನ್ನ ಅನಂತಾ ನಂತ ಪ್ರಣಾಮಗಳು. ಮಾತೃ ದೇವೋ ಭವ! ಪಿತೃ ದೇವೋ ಭವ! ಆಚಾರ್ಯ ದೇವೋ ಭವ!

**ದ್ಯಾರ್ದೇವ:**—ಪೃಥ್ವೀ! ಯಮಧರ್ಮರಾಜನಬಳಿಗೆ ಹೋಗೋಣ. ವತ್ಸ, ಧೃತಿಗೆಡದಿರು. ನಾವು ಬೇಗ ಹಿಂತಿರುಗುವೆವು.

**ನಚಿಕೇತ:**—ತಮ್ಮಿರ್ವರನ್ನು ಸಂದರ್ಶಿಸಿದ ಭಾಗ್ಯಶಾಲಿಯಾದ ನಾನು ಇಂದೇ ಮೃತನಾದರೂ ನಿಶ್ಚಿಂತನಾಗಿರುವೆನು. ಯಮ ಧರ್ಮರಾಜನು ನನಗೆ ಗುರು. ಆತನನ್ನು ಕಂಡಾಗ ಈ ನನ್ನ ಹಿಂಸೆಗಾಗಿ ನಿಷ್ಠುರ ವಚನಗಳನ್ನಾಡಕೂಡದೆಂದು ಬೇಡು ವೆನು. ನನ್ನ ಮೇಲಣ ಅಭಿಮಾನದಿಂದ ಆ ರೀತಿ ನಡೆದು ಹೋದೀತೆಂದು ಶಂಕೆ. ಮಾತೃ ದೇವೋ ಭವ, ಪಿತೃ ದೇವೋ ಭವ, ಆಚಾರ್ಯ ದೇವೋ ಭವ!

**ದಂಪತಿಗಳು:**—ಇಷ್ಟಾರ್ಥ ಸಿದ್ಧಿಯಾಗಲಿ. (ದ್ಯಾವಾಪೃಥ್ವಿಯರು **ಹೋಗುವರು. ಅವರು ನಿಷ್ಕ್ರಮಿಸಿದೊಡನೆಯೇ ನೇಪಥ್ಯದಿಂದ**

ವೇದಪಠನವು * ಪ್ರಾರಂಭವಾಗುವುದು.)

**ನಚಿಕೇತ:**—(ಸ್ವಗತ) ನಾನು 'ಆಚಾರ್ಯದೇವೋ ಭವ' ಎನ್ನುವ ವೇಳೆಗೆ ಸರಿಯಾಗಿ ಅಗ್ನಿಯನ್ನು ಸ್ತುತಿಸುವ ವೇದ ಗಾನ! ಇಲ್ಲವೇ ಮನೋವಿಕಾರದಿಂದ ಹಾಗೆ ತೋರುತ್ತಿದೆಯೋ! (ವೇದಗಾನವು ನಿಂತಬಳಿಕ) ಭಗವನ್! ಅಗ್ನಿದೇವ! ನಾನು ವಾಸನಾತ್ರಯವೆಂಬ ಪಶುವನ್ನು ವಧಿಸಿ ಯಜ್ಞ ಮಾಡುತ್ತೇನೆ. ನೀನು ಆ ಯಜ್ಞವನ್ನು ಸಾಂಗಗೊಳಿಸು. ಅರಿವರ್ಗಗಳೇ ಬ್ರಹ್ಮಾಗ್ನಿಯಲ್ಲಿ ಉರಿದು ಭಸ್ಮವಾಗುವ ಸಮಿತ್ತುಗಳಾಗಲಿ. ಆತ್ಮಾರ್ಪಣವೇ ನಾನು ಸಂಗ್ರಹಿಸಿರುವ ದ್ರವ್ಯಗಳು. ಹಿರಣ್ಯಗರ್ಭನಲ್ಲಿಯೂ, ಆತನಿಗೆ ಪ್ರಿಯನಾದ ನಿನ್ನಲ್ಲಿಯೂ, ನನಗಿರುವ ಅಚಲವಾದ ಭಕ್ತಿಯೇ ದೇವಪ್ರಿಯವಾದ ಆಜ್ಯಧಾರೆ. ವಾಸುದೇವರಲ್ಲಿಯೂ, ಯಮಧರ್ಮರಾಜನಲ್ಲಿಯೂ ನನಗಿರುವ ಗುರುಭಕ್ತಿಯೇ ನನ್ನ ಪರಮಪವಿತ್ರವಾದ ದೀಕ್ಷಾವಸ್ತ್ರಗಳು........ಇದೇನು! ನನ್ನ ಮಾತುಗಳು ಮುಗಿಯುವ ಮೊದಲೇ ಅಮಿತವಾದ

---

* ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ। ಹೋತಾರಂ ರತ್ನಧಾತಮಂ ॥ ೧ ॥ ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ। ಸ ದೇವಾಂ ಏಹ ವಕ್ಷತಿ ॥ ೨ ॥ ಅಗ್ನಿನಾರಯಿಮಶ್ನವತ್ಪೋಷಮೇವ ದಿವೇ ದಿವೇ। ಯಶಸಂ ವೀರವತ್ತಮಂ ॥ ೩ ॥ ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ। ಸ ಇದ್ದೇವೇಷುಗಚ್ಛತಿ ॥ ೪ ॥ ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ। ದೇವೋ ದೇವೇಭಿರಾಗಮತ್ ॥ ೫ ॥ ಯದಂಗದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ। ತವೇತ್ತತ್ಸತ್ಯಮಂಗಿರಃ ॥ ೬ ॥ ಉಪತ್ವಾಗ್ನೇ ದಿವೇ ದಿವೇ ದೋಷಾವಸ್ತರ್ಧಿಯಾ ವಯಂ। ನಮೋ ಭರಂತ ಏಮಸಿ ॥ ೭ ॥ ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ। ವರ್ಧಮಾನಂ ಸ್ವೇ ದಮೇ॥ ೮ ॥ ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋಭವ। ಸಚಸ್ವಾ ನಃ ಸ್ವಸ್ತಯೇ ॥ ೯ ॥

ಆನಂದವನ್ನೀಯುವ ಅನಿರ್ವಚನೀಯವಾದ ಅಂತರ್ಜ್ಯೋತಿ ದರ್ಶನ (ಕಣ್ಣುಗಳನ್ನು ಮುಚ್ಚಿ ಆನಂದಾನುಭವದಿಂದ) ಆನಂದ ಪಾರವಶ್ಯದಿಂದ ದೇಹದ ಮೇಲಣ ಸ್ಮೃತಿಯೇ ತಪ್ಪುವಂತಿದೆ. ಭಗವನ್! ಕೃಪಾಜಲಧೇ!

**ಯಮಧರ್ಮರಾಜ:**—(ಪ್ರವೇಶಿಸಿ) ತೇಜಸ್ವಿಯಾದ ಈ ವಟುವು ಪ್ರದರ್ಶಿಸುತ್ತಿರುವ ಇಂದ್ರಿಯನಿಗ್ರಹ ಸಾಮರ್ಥ್ಯವನ್ನೂ, ಅಚಲವಾದ ಪ್ರೀತಿಭಕ್ತಿಗಳನ್ನೂ, ನೆನೆದು ನೆನೆದು ನನ್ನ ಮನಸ್ಸು ಆನಂದದ ಅಮೃತಲಹರಿಯಲ್ಲಿ ತೇಲಿ ಓಲಾಡುತ್ತಿದೆ. ಧನ್ಯ, ಧನ್ಯ, ನಚಿಕೇತ, ನೀನೇ ಧನ್ಯ. ದೇಹವಾಸನೆಯು ನಿವಾರಣೆಯಾಗಿ ದೇಹಾಭಿಮಾನವು ಲಯವಾಗಿದೆಯೇ ಎಂಬ ಪರೀಕ್ಷೆಗಾಗಿ ನಿನ್ನನ್ನು ವಿಧವಿಧವಾಗಿ ಹಿಂಸಿಸುತ್ತಿರುವ ನನ್ನ ಕ್ರೌರ್ಯವನ್ನು ಸ್ಮರಿಸಿದರೆ (ಸಂಕಟದಿಂದ) ನನ್ನ ಕರುಳೇ ಕಿತ್ತುಬರುತ್ತದೆ. (ಸ್ವಲ್ಪಹೊತ್ತು ಆಲೋಚನಾ ಮಗ್ನನಾಗಿದ್ದು) ಹಿರಣ್ಯಗರ್ಭನ ಚಿತ್ತ. (ನಚಿಕೇತನನ್ನು ನೋಡಿ ಆನಂದಿಸಿ) ಯೋಗ ಸಮಾಧಿಯಲ್ಲಿ—ಅಖಂಡಸುಖವನ್ನನುಭವಿಸುತ್ತ ಬ್ರಹ್ಮಜ್ಞಾನ ಸುಧಾಚಂದ್ರಿಕೆಯ ತನಿಬೆಳಕಿನ ಸೌಂದರ್ಯ ವನ್ನರಿಯುವುದರಲ್ಲಿರುವ ಮಾನವದೇಹದ ಪರಂಜ್ಯೋತಿ ಸ್ವರೂಪ, ನನ್ನ ಅಪಚಾರವನ್ನು ಸಹಿಸು. (ರೋಷಭೀಷಣ ವಾದಂತೆ ತೋರುವ ಸ್ವರದಿಂದ) ಎಲೋ ಮೂರ್ಖ ಬಾಲಕ ನಚಿಕೇತ! ನಿನ್ನ ಕಪಟ ಧ್ಯಾನವನ್ನು ನಿಲ್ಲಿಸು. (ಕರುಣೆಯಿಂದ) ನನ್ನ ಪ್ರಿಯ ಬಂಧುವು ಬಹಿರ್ಮುಖನಾಗುವ ಮೊದಲು ಈತನ ಬಂಧನಗಳನ್ನು ಬಿಚ್ಚುವೆನು. (ಸರಪಳಿಯನ್ನು ಬಿಚ್ಚಿ ದೂರವಾಗೆಸೆಯುವನು) ಹಿರಣ್ಯಗರ್ಭ! ನಿನ್ನ ಸೇವೆ. (ರೋಷ ಪರುಷವಾದಂತೆ ತೋರುವ ಧ್ವನಿಯಿಂದ) ದುರಾತ್ಮ, ಕಣ್ಣುತೆರೆ.

**ನಚಿಕೇತ:**– (ಕಣ್ಣುಗಳನ್ನು ಮುಚ್ಚಿಕೊಂಡು) ಯಮಧರ್ಮರಾಜ! ನೀನೆನ್ನ ಗುರು!

**ಯಮಧರ್ಮರಾಜ:**-ಎಲವೋ ಕಣ್ದೆರೆದುನೋಡು. (ನಚಿಕೇತನು ಕಣ್ದೆರೆಯುವನು. ಭಯಂಕರವಾಗಿರುವ ದೊಡ್ಡ ಸರ್ಪವೊಂದು ಬುಸುಗುಟ್ಟುತ್ತ ಬರುವುದು.) ಈ ಅಹಿರಾಜನ ವಿಷಾಗ್ನಿಯಿಂದ ನಿನ್ನ ದೇಹವು ದಗ್ಧವಾಗುವುದು.

**ನಚಿಕೇತ:**—ನನ್ನಂತಹ ಈ ಅಲ್ಪವಾದ ಅತಿ ತುಚ್ಛವಾದ ಪ್ರಾಣಿಯನ್ನು ಕೊಲ್ಲಲು, ಇಷ್ಟು ದೊಡ್ಡ ಪ್ರಾಣಿಗೆ ಆಯಾಸಕೊಡಬೇಕೆ?

**ಯಮಧರ್ಮರಾಜ:**-ಈಗಲಾದರೂ ಪಶ್ಚಾತ್ತಾಪಪಟ್ಟು ಪ್ರಾಣಭಿಕ್ಷೆಯನ್ನು ಬೇಡು. ನಿನ್ನ ಮೂರ್ಖತೆಯನ್ನು ಬಿಟ್ಟು ಹಿಂದಿರುಗು.

**ನಚಿಕೇತ:**—ಯಮಧರ್ಮರಾಜ! ನನ್ನನ್ನು ಮೃತಿಯನ್ನೈದಿಸುವುದಕ್ಕಾಗಿ ನೀನು ಕರೆದುತಂದಿರುವ ಈ ಅಹಿರಾಜನೂ ನನ್ನ ಪರಮಬಂಧುವು. ಸೃಷ್ಟಿಯುಲ್ಲಿರುವ ಸಕಲಪ್ರಾಣಿಗಳೂ ನನ್ನ ಪ್ರಿಯಬಂಧುಗಳು. ನನ್ನ ಹೃದಯವನ್ನೂ, ಮನಸ್ಸನ್ನೂ, ಆವರಿಸಿರುವುದು ವಿಶ್ವಪ್ರೇಮವೊಂದು; ನಿನ್ನ ಅನುಗ್ರಹದಿಂದ ಸಾಕ್ಷಾತ್ಕಾರವಾದ ಅಗ್ನಿದೇವನ ದಿವ್ಯರೂಪವೊಂದು; ಇವೆರಡೇ.

**ಯಮಧರ್ಮರಾಜ:**—(ರೋಷಪರವಶನಾದಂತೆ ನಟಿಸುತ್ತ) ಇದೇ ಕೊನೆಯ ಶಿಕ್ಷೆ. ಉಗ್ರಶಿಕ್ಷೆಗಳೆಲ್ಲಕ್ಕೂ ಪೂರ್ಣಾಹುತಿಯಂತಿರುವ ಈ ಘೋರತರವಾದ ಶಿಕ್ಷೆಯಿಂದ ನೀನು ಭಸ್ಮೀಕೃತನಾಗಿ ನಿರ್ನಾಮವಾಗುವೆ. ಈ ಅಹಿಯ ಕರಾಳದಂಷ್ಟ್ರದಿಂದ ಹೊರಡುವ ದಾವಾನಲಜ್ವಾಲೆಯಲ್ಲಿ ಕಾಡುಗಿಚ್ಚಿಗೆ ಸಿಕ್ಕಿದ ಕೋಮಲ ಕುಸುಮದಂತೆ ನಿನ್ನ ಶರೀರವು ಸೀದುಹೋಗುವುದು.

**ನಚಿಕೇತ:**—ಶೀರ್ಣವಾಗುವುದಕ್ಕಾಗಿಯೇ ಹುಟ್ಟಿರುವ ಈ ಶರೀರವು ಸೀದುಹೋಗಲಿ. ಹಿರಣ್ಯಗರ್ಭನಲ್ಲಾದರೂ ನ್ಯಾಯವಿದೆಯೇ ಎಂಬುದನ್ನು ಪರೀಕ್ಷಿಸಿ ನೋಡುವೆನು.

**ಯಮಧರ್ಮರಾಜ:**—ಅಹಿರಾಜ! ಈ ಧೂರ್ತನ ಜೀವವನ್ನು ಕೊನೆಗಾಣಿಸು.

**ನಚಿಕೇತ:**—ಯಜ್ಞೇಶ್ವರ! ನಿನ್ನ ದಯೆಬಂದಂತೆ ಮಾಡು. (ಕಣ್ಣುಗಳನ್ನು ಮುಚ್ಚಿ ಧ್ಯಾನಿಸುವನು.)

(ಸರ್ಪವು ಮಾಯವಾಗುವುದು. ದೊಡ್ಡ ಶಬ್ದವಾಗುವುದು. ಅಗ್ನಿದೇವನು ಪ್ರತ್ಯಕ್ಷನಾಗುವನು. ಶ್ಯಾಮಲಾದೇವಿಯೂ, ಯಮಭಟರೂ, ಪ್ರವೇಶಿಸುವರು. ಎಲ್ಲರೂ ಅಗ್ನಿದೇವನಿಗೆ ನಮಸ್ಕರಿಸುವರು.)

**ಅಗ್ನಿ:**—ವತ್ಸ! ನಚಿಕೇತ! ನಿನ್ನ ಮಹಾಯಜ್ಞದಿಂದ ಸಂತುಷ್ಟನಾಗಿರುವೆನು. ನಿನ್ನ ಕೋರಿಕೆಯೇನು?

**ನಚಿಕೇತ:**—(ನಮಸ್ಕರಿಸಿ ಸ್ತೋತ್ರಮಾಡಿ) ಪ್ರಭೋ! ಹವ್ಯವಾಹನ! ನಿನ್ನ ದರ್ಶನದಿಂದ ಕೃತಾರ್ಥನಾದೆನು. ನೀನು ಸುಪ್ರೀತನಾದರೆ ನನಗೆ ಗುರುಸ್ವರೂಪನಾಗಿರುವ ಯಮಧರ್ಮರಾಜನು ಪ್ರಸನ್ನನಾಗುವಂತೆ ಕರುಣಿಸು. ಮಾನವರಿಗೆ ನರಕದಲ್ಲಿ ನಡೆಯುತ್ತಿರುವ ಕ್ರೂರದಂಡನೆಗಳನ್ನು ತಪ್ಪಿಸಿ ಕಾಪಾಡು. ಅದೊಂದೇ ನನ್ನ ಪ್ರಾರ್ಥನೆ.

**ಅಗ್ನಿ:**—ತೇಜಸ್ವಿಯೆ! ನಿನ್ನಂತಹ ಭಕ್ತಶ್ರೇಷ್ಠರು ಅತಿವಿರಳ. ಯೋಗದೃಷ್ಟಿಯನ್ನಿತ್ತಿರುವೆನು. ನೀನು ನಿನ್ನ ಗುರುವೆಂದು ಭಾವಿಸಿರುವ ಯಮಧರ್ಮರಾಜನ ನಿಜಸ್ವರೂಪವನ್ನು ನೋಡು.

**ನಚಿಕೇತ:**—(ಧ್ಯಾನಪಾರವಶ್ಯದಿಂದ ಕಣ್ಣುಗಳನ್ನು ಮುಚ್ಚಿ ಆಲೋಚಿಸುತ್ತಿದ್ದು) ಎಂತಹ ಮನೋಜ್ಞವಾದ ಮೆಚ್ಚಿನ ನೋಟ ಯಮಧರ್ಮರಾಜನ ಅಪಾರವಾದ ಅನುಕಂಪ.........ಲೋಕಗುರುವಾದ ಕರುಣಾರ್ದ್ರ ಹೃದಯನ ಮೋಹನರೂಪ......... ರುದ್ರಶಕ್ತಿ........ವಿಷ್ಣುಶಕ್ತಿ........ಕ್ಷೀರತರ್ಪಣ........ಪ್ರಾಣಿಮಾತ್ರದಲ್ಲಿ ದಯೆಯಿಂದ ಕ್ಷೀರತರ್ಪಣ ಕೊಡುತ್ತಿರುವನು....

ವಿಷ್ಣುಶಕ್ತಿ ರುದ್ರಶಕ್ತಿಗಳು ಪ್ರಾಣಿಗಳನ್ನು ಲಯಹೊಂದಿಸುವುವು......ಎಂತಹ ಅದ್ಭುತ ಪ್ರಪಂಚ! (**ಕಣ್ತೆರೆದು ಆಶ್ಚರ್ಯದಿಂದಲೂ, ಪಶ್ಚಾತ್ತಾಪದಿಂದನೂ ಯಮಧರ್ಮರಾಜನ ಬಳಿಗೆಹೋಗಿ ಆತನಿಗೆ ದಂಡಪ್ರಣಾಮಮಾಡಿ**) ಭಗವನ್! ನಿನ್ನ ನಿಜಸ್ವರೂಪವನ್ನರಿತಿರಲಿಲ್ಲ. ನೀನು ಪರೀಕ್ಷಾರ್ಥವಾಗಿ ದಂಡನೆಗಳನ್ನು ವಿಧಿಸಿದುದು ಗೊತ್ತಾಗಲಿಲ್ಲ. ನಿನ್ನ ಮೋಹನ ಮೂರ್ತಿಯು ಹೃದಯದಲ್ಲಿ ಪ್ರತಿಷ್ಠಿತವಾಗಿದ್ದೂ, ಶಂಕಾತಂಕಗಳಿಗೊಳಗಾದೆನು. ಅಜ್ಞಾನವಶದಿಂದ ಪತಿತನಾದೆನು. ಧರ್ಮಪ್ರಭುವಾದ ನೀನಿರುವಲ್ಲಿ ನರಕನಿವಾಸಿಗಳನ್ನುದ್ಧರಿಸಲೆಳಸಿದ ನಾನೆಂತಹ ಪಾಮರನು!......ಆತ್ಮೋದ್ಧಾರವಾಗಬೇಕು...... ಆತ್ಮೋದ್ಧಾರವನ್ನರಿಯದವನಿಂದ ಅನ್ಯರ ಉದ್ಧಾರವಾಗದು.

**ಅಗ್ನಿ:**—ನಚಿಕೇತ! ನಿನಗಾವ ಕೋರಿಕೆಯುಂಟು?

**ನಚಿಕೇತ:**—ನಾನು ಅಂತೇವಾಸಿಯು. ನನ್ನ ಜೀವನ ಸರ್ವಸ್ವನಾದ ಪರಮಗುರುವೂ, ನೀನೂ, ಅನುಗ್ರಹಮಾಡಿದುದೇ ನನ್ನ ಪರಮ ಸೌಭಾಗ್ಯ. ನಿಮ್ಮಿರ್ವರ ದರ್ಶನದಿಂದಲೂ ಧನ್ಯನಾಗಿರುವ ನನಗೆ ಮತ್ತಾವ ಕಾಮ್ಯಾರ್ಥವೂ ಉಳಿದಿಲ್ಲ.

**ಅಗ್ನಿ:**—ಯಮಧರ್ಮರಾಜ! ಇನ್ನು ಆಲಸ್ಯವೇಕೆ?

**ಯಮಧರ್ಮರಾಜ:**—ನನಗೆ ಎಷ್ಟು ಶ್ಲಾಘನೀಯವಾದ ಸತ್ಪದವಿಯು ಇಂದು ದೊರೆತಂತಾಯಿತೆಂದೂ, ನಾನೆಷ್ಟು ಪುಣ್ಯಶಾಲಿಯೆಂದೂ, ಆನಂದಿಸುತ್ತಿದ್ದೇನೆ. (**ಅಗ್ನಿಗೆ ಕೈಮುಗಿದು**) ನಿನ್ನ ಆಜ್ಞೆಯನ್ನು ನೆರವೇರಿಸುತ್ತೇನೆ (**ನಚಿಕೇತನನ್ನು ಆದರದಿಂದ ಸಮೀಪಕ್ಕೆ ಮೆಲ್ಲಗೆ ಸೆಳೆದುಕೊಂಡು**) ಬಾ, ಬಾ, ಶಿಷ್ಯರೂಪದ ಶ್ರೇಯೋ ಭಂಡಾರವೆ, ಬಾ, ಬಾ. ನಿನ್ನಿಂದ ಭೂಲೋಕವೇ ಉದ್ಧಾರವಾಗುವುದು. ನಿನ್ನ ಮೂರು ಕೋರಿಕೆಗಳೂ ನೆರವೇರಿದುವೆಂದು ತಿಳಿ. ಅಗ್ನಿವಿದ್ಯೆಯಿಂದ ಅಗ್ನಿಯನ್ನೊಲಿಸಿ

ಕೊಂಡಿರುವೆ. ನಿನ್ನ ಮಾತಾಪಿತೃಗಳಿಗೆ ಶಾಂತಿಯನ್ನು ಕೊಟ್ಟಿರುವೆನು. ನೀನು ಭೂಲೋಕಕ್ಕೆ ಹಿಂದಿರುಗಿದಾಗ ಅವರನ್ನು ಮತ್ತೆ ಕಾಣುವೆ.

**ನಚಿಕೇತ**:—ಪರಮಾನುಗ್ರಹ. ನಿನ್ನ ಚಿತ್ತ; ನನ್ನ ಭಾಗ್ಯ. ಆದರೆ, ಇಲ್ಲಿಂದ ಹೋಗಲಾರೆ.

(ದ್ಯಾವಾ ಪೃಥ್ವಿಯರು ಪ್ರವೇಶಿಸುವರು. ಅಗ್ನಿಯೂ ಯಮಧರ್ಮರಾಜನೂ, ಉಳಿದ ಸಮಸ್ತರೂ ವಂದಿಸುವರು. ಅವರು ಆಶೀರ್ವದಿಸುವರು)

**ಯಮಧರ್ಮರಾಜ**:- ಪಾವಕಾನಸ್ಸರಸ್ವತೀ। ವಾಜೇಭಿರ್ವಾಜಿನೀವತೀ ॥ (ನಚಿಕೇತನನ್ನು ಸಮೀಪಕ್ಕೆ ಕರೆದು ಕಿವಿಯಲ್ಲಿ ಉಪದೇಶಿಸಿ) ಶ್ರೇಯಸ್ಕಾಮನಾದ ಶುದ್ಧಹೃದಯನೆ! ಅಂಡಾಂಡ ಪಿಂಡಾಂಡಗಳಲ್ಲಿ ಹಿರಣ್ಯಗರ್ಭನ ತೇಜಸ್ಸಿನ ಅಮೃತ ಪ್ರಭಾಲಹರಿಯ ವಿಭೂತಿಯನ್ನು ನೋಡು. (ನಚಿಕೇತನು ಆನಂದ ವಿಸ್ಮಯಗಳ ಭಾರವನ್ನು ಸಹಿಸಲಾರದವನಂತೆ ಯಮಧರ್ಮರಾಜನ ದೇಹವನ್ನೇ ಆಶ್ರಯಿಸಿ ನಿಲ್ಲುವನು) ಇತ್ತ ನೋಡು (ದ್ಯಾವಾಪೃಥ್ವಿಯರನ್ನು ತೋರಿಸಿ) ಪ್ರಸನ್ನರಾಗಿ ನಿಂತಿರುವ ದೇವ ಮಾತಾಪಿತೃಗಳು. ನನಗೂ ಅಗ್ನಿದೇವನಿಗೂ ಅವರು ಪೂಜ್ಯರು. (ನಚಿಕೇತನು ತನ್ನ ಆನಂದಭರದ ಅಲಸಗಮನದಲ್ಲಿ ಅತಿ ಕಷ್ಟದಿಂದ ಅವರ ಬಳಿಗೆ ಹೋಗಿ ದಂಡಪ್ರಣಾಮ ಮಾಡಿ ಅವರ ಆಶೀರ್ವಾದವನ್ನು ಸ್ವೀಕರಿಸಿ ಬರುವನು.)

**ನಚಿಕೇತ**:—ಪರಮ ಪೂಜ್ಯನಾದ ಗುರುದೇವ! ನಿನ್ನ ಅನುಗ್ರಹವು ಅಪಾರವಾದುದು.

**ಯಮಧರ್ಮರಾಜ** :—(ಸುಪ್ರೀತನಾಗಿ ಶಿಷ್ಯನನ್ನಾಲಂಗಿಸಿ) ವತ್ಸ! ನಚಿಕೇತ! ಸಚ್ಛಿಷ್ಯಾರ್ಪಿತವಾದ ಪರಾವಿದ್ಯೆಯು ಕಲ್ಪಲತಾಸದೃಶವಾದುದು. ನೀನು ಅಂಡಾಂಡ ಪಿಂಡಾಂಡಗಳಲ್ಲಿ

ನೋಡಿದ ಕೈವಲ್ಯ ವಿಭೂತಿಯನ್ನೇ ಬ್ರಹ್ಮಾಂಡದಲ್ಲಿ ಅನು ಸಂಧಾನಮಾಡಿ ನೋಡು. ವಿಶ್ವಾತ್ಮನೂ, ವಿಶ್ವಬಂಧುವೂ, ವಿಶ್ವೇಶ್ವರನೂ ಆದ ಪರಮಾತ್ಮನ ಸಗುಣರೂಪ ಸಾಕ್ಷಾತ್ಕಾರ ವೈಭವವನ್ನು ನೋಡಿ ಧನ್ಯನಾಗು. ಮಹರ್ಷಿ ನಚಿಕೇತ! ನೋಡು, ನೋಡು, ಹಿರಣ್ಯಗರ್ಭನ ಸಾಕಾರ ಮೂರ್ತಿಯನ್ನು! (ಶೃತಿಮಾಡಿದ ಸಹಸ್ರಾರು ಮೃದಂಗಗಳ ಧ್ವನಿಯಂತೆ ನಾದಘೋಷ ವಾಗುವುದು. ತೆರೆಯು ಇಬ್ಬಗೆಯಾಗಿ ವಿಭಾಗವಾಗುವುದು. ರಂಗ ಸ್ಥಳಕ್ಕಿಂತ ಮೇಲಿನ ಮಟ್ಟದಲ್ಲಿ ಮೇಘ ಪಙ್ತ್ತಿಗಳನ್ನು ಬೆಳಗಿಸು ತ್ತಿರುವ ಹಿರಣ್ಯಗರ್ಭನ ಸಂದರ್ಶನವಾಗುವುದು. ಸಮಸ್ತರೂ ದಂಡಪ್ರಣಾಮ ಮಾಡುವರು.)

**ಯಮಧರ್ಮರಾಜ**:-(ದಿವ್ಯದೃಷ್ಟಿಯ ಆನಂದವನ್ನನುಭವಿಸಿ ಮುಚ್ಚಿದ ಕಣ್ಣುಗಳಿಂದ) ಪ್ರಭುವೆ! ಭವಿಷ್ಯವು ಹೀಗಿದೆಯೆ? ಅಮೋ ಘವಾದ ನಿನ್ನ ಲೀಲೆಯನ್ನು ನಾನು ಬಣ್ಣಿಸಬಲ್ಲೆನೆ? ನಾನು ಕೋರಿದ ಮಾತ್ರಕ್ಕೇ ಯಾಮ್ಯಪಟ್ಟವು ಕೊನೆಗಾಣುವುದೆ?.... ನಿನ್ನ ಚಿತ್ತ. ನಿನ್ನ ಚಿತ್ತ. (ದಂಡಪ್ರಣಾಮ ಮಾಡಿರುವ ನಚಿಕೇತ ನನ್ನು ಮೇಲಕ್ಕೆತ್ತಿ) ಮಾನವ್ಯತೆಯ ಸೌಭಾಗ್ಯಶಿಖರ ಸ್ವರೂಪ ನಾದ ಪಾವನ ವಟುಪುಂಗವನೆ! ಮೇಲಕ್ಕೇಳು ನಿನ್ನ ದೆಸೆ ಯಿಂದ ನನಗೆ ಮಹೋಪಕಾರವಾಯಿತು.

**ನಚಿಕೇತ**:—ಪ್ರಭೋ ವಿಶ್ವಾತ್ಮನಾದ ವಿರಾಟ್ಪುರುಷ! ಮನಸ್ಸಿನಿಂದ ಚಂದ್ರಮನನ್ನೂ, ಚಕ್ಷುಸ್ಸಿನಿಂದ ಸೂರ್ಯನನ್ನೂ, ಮುಖ ದಿಂದ ಇಂದ್ರಾಗ್ನಿಗಳನ್ನೂ, ಪ್ರಾಣದಿಂದ ವಾಯುವನ್ನೂ ಸೃಷ್ಟಿಸಿ ಬ್ರಹ್ಮಾಂಡನಾಟಕಸೂತ್ರಧಾರನೆನಿಸಿ, ಸಕಲ ಚರಾ ಚರ ಸೃಷ್ಟಿಯನ್ನೂ ಅನುಗ್ರಹಿಸಿ ಕಾಪಾಡುತ್ತಿರುವ ಪರಮ ಪೂಜ್ಯನಾದ ನಿನ್ನನ್ನು ಸ್ತುತಿಸಲು ಈ ಹೀನ ದೀನ ಮಾನವ ನಿಗೆಲ್ಲಿ ಸಾಮರ್ಥ್ಯ? ನನ್ನ ಜನ್ಮವೇ ಸಾರ್ಥಕವಾಯಿತು. ಪ್ರಭುವೆ! ನನ್ನ ಮೌನವೇ ನಿನ್ನ ಸ್ತೋತ್ರವೆಂದು ಭಾವಿಸಿ

ಉದ್ಧರಿಸು. ನಿನ್ನ ಈ ಮಂಗಳ ಶ್ರೀಮೂರ್ತಿಯನ್ನು ನೋಡಿ ಧನ್ಯನಾದೆನು.

(ಹಿರಣ್ಯಗರ್ಭನು ಮೌನವಾಗಿಯೇ ಆಶೀರ್ವದಿಸಿ ಅಭಯಹಸ್ತನಾಗುವನು.)

**ಯಮಧರ್ಮರಾಜ:**—ಪ್ರಿಯಶಿಷ್ಯ, ನಚಿಕೇತ, ಹಿರಣ್ಯಗರ್ಭನ ಆಶೀರ್ವಾದ....ಅಲಭ್ಯಲಾಭವನ್ನು ಪಡೆದು ನೀನು ಕೃತಾರ್ಥನಾದೆ. ಆಲಿಸಿ ಕೇಳು! ಒಟ್ಟು ಸೃಷ್ಟಿಯ ಮಂಗಳ ಗೀತವೇ ಓಂಕಾರರೂಪದಲ್ಲಿ ಕೇಳುತ್ತಿರುವುದು.

(ಓಂ, ಓಂ, ಎಂಬಂತೆ ನಗಾರಿಯ ಧ್ವನಿಯು ಕೇಳಿಸುವುದು.)

**ನಚಿಕೇತ:**—ಪ್ರಭುವೆ! ಅನುಗ್ರಹದ ಮೇಲೆ ಅನುಗ್ರಹ. ಪ್ರೀತಿ ಕರುಣೆಗಳ ಅಮೃತವರ್ಷ.

(ಎಲ್ಲರೂ ಹಿರಣ್ಯಗರ್ಭನಿಗೆ ವಂದಿಸುವರು)

(ತೆರೆಯು ಬೀಳುವುದು)

**ಸಂಪೂರ್ಣ.**

---

ಬಿ. ಶ್ರೀನಿವಾಸಯ್ಯಂಗಾರ್, ಪ್ರಿಂಟರ್, ಬೆಂಗಳೂರು ಸಿಟಿ.